KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಅಕ್ಟೋಬರ್ ೨೩, ೨೦೦೮ (ಕಾರ್ತೀಕ ೧, ಶಕ ವರ್ಷ ೧೯೩೦) | ಸಂಚಿಕೆ ೪೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬೀದರ್ ಜಿಲ್ಲೆಗೆ ಎರಡನೇ ಕಂತಿನ ರಾಜ್ಯದ ಪಾಲನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ :** ಕೇಂದ್ರ ಸರ್ಕಾರದ ಪತ್ರದ ಸಂ. ಜೆ–12022/2/2008–ಎನ್‌ಆರ್‌ಇಜಿಎ–ಎಸ್‌ಎಲ್ ನಂ. 137 ದಿನಾಂಕ 22–7–2008.

**ಪ್ರಸ್ತಾವನೆ :**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ ಕೇಂದ್ರ ಸರ್ಕಾರವು ಬೀದರ್ ಜಿಲ್ಲೆಗೆ ರೂ. 1500.00 ಲಕ್ಷಗಳನ್ನು ಎರಡನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ಸದರಿ ಯೋಜನೆಗೆ, ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಬೀದರ್ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ. 150.00 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 16 ಉಖಾಯೋ 07, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಎರಡನೇ ಕಂತಿನ ಅನುದಾನವಾದ ರೂ. 150.00 ಲಕ್ಷಗಳನ್ನು (ರೂ. ಒಂದು ನೂರ ಐವತ್ತು ಲಕ್ಷಗಳು ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬೀದರ್ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ. ಎಫ್‌ಡಿ. 7 ಜೆಡ್‌ಪಿಎ 2003, ದಿನಾಂಕ: 14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ. ಆಇ 01 ಜಿಪಅ 07, ದಿನಾಂಕ 19–1–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ "2505 ಗ್ರಾಮೀಣ ಉದ್ಯೋಗ 02–ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101–ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ–059 ಇತರೆ ಖರ್ಚು (ಯೋಜನೆ)" (2505–02–101–001–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ 338 ಪಿಬಿಎಸ್ 2008, ದಿನಾಂಕ 29–7–2008ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ
ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Annexure to G.O. No. RDP 16 NRE 2007, Bangalore Dated 4th August 2008**
**Statement showing the release of II instalment of State share of funds under NREGA during 2008-09**

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | Bidar | 22-7-2008 | 1500.00 | 150.00 | 150.00 |

P.R. 1181

**C.M. SHIROL**
Director,
Project, Planning & Monitoring Unit,
And E/o Addl. Secretary to Govt,
Rural Development & P. Raj Dept.

## ಶಿಕ್ಷಣ ಸಚಿವಾಲಯ

**ಸಂಖ್ಯೆ: ಇಡಿ: 91: ಯೋಸಕಾ: 2008, ಬೆಂಗಳೂರು ದಿನಾಂಕ: 29ನೇ ಆಗಸ್ಟ್ 2008**

**ತಿದ್ದುಪಡಿ ಆದೇಶ**

**ವಿಷಯ :** ಆರ್.ಐ.ಡಿ.ಎಫ್–13 ಯೋಜನೆಯಡಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಇಡಿ 91: ಯೋಸಕಾ: 2008, ಬೆಂಗಳೂರು, ದಿನಾಂಕ: 7–6–2008.

**ಪ್ರಸ್ತಾವನೆ :**

(1) ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಸರ್ಕಾರದ ಆದೇಶದಲ್ಲಿನ ಕಂಡಿಕೆ 2ರ ಷರತ್ತಿನ ಭಾಗದ

(ಅ) ಸದರಿ ಕಾಮಗಾರಿಯನ್ನು ನಿಗಧಿಪಡಿಸಿದ ಅನುದಾನದ ಮಿತಿಯೊಳಗೇ ಕರ್ನಾಟಕ ಭೂ ಸೇನಾ ನಿಗಮದಿಂದ ಕೈಗೊಳ್ಳತಕ್ಕದ್ದು.

**ಎಂಬುದಕ್ಕೆ ಬದಲಾಗಿ**

(ಅ) ಸದರಿ ಕಾಮಗಾರಿಯನ್ನು ನಿಗಧಿಪಡಿಸಿದ ಅನುದಾನ ಮಿತಿಯೊಳಗೇ ಲೋಕೋಪಯೋಗಿ ಇಲಾಖೆಯಿಂದ ಕೈಗೊಳ್ಳತಕ್ಕದ್ದು.

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1272

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ಕಂದಾಯ ಸಚಿವಾಲಯ**

**ಆರ್‌ಡಿ 46 ಎಎಸ್‌ಡಿ 2005, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2008.**

**ತಿದ್ದುಪಡಿ**

ಸರ್ಕಾರದ ಸುತ್ತೋಲೆ ಸಂ: ಆರ್‌ಡಿ 46 ಎಎಸ್‌ಡಿ 2005, ದಿನಾಂಕ: 12–3–2008ರ 6ನೇ ಕಂಡಿಕೆಯ ನಂತರ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

ಉತ್ತರ ಜೀವಿ ಪ್ರಮಾಣ ಪತ್ರವನ್ನು ಪಡೆಯಲು ಒಂದು ವರ್ಷದ ಮೇಲ್ಪಟ್ಟು ನಂತರ ಸಲ್ಲಿಸುವ ಪ್ರಕರಣಗಳಿಗೆ ಗರಿಷ್ಠ ರೂ. 50/– ರವರೆಗೆ ದಂಡ ವಿಧಿಸಿ ಉತ್ತರ ಜೀವಿತ ಪ್ರಮಾಣ ಪತ್ರವನ್ನು ನೀಡಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1225

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2007–08ನೇ ಸಾಲಿನಲ್ಲಿ ಬಿಡುಗಡೆಯಾದ ಆಹಾರಧಾನ್ಯಗಳಿಗೆ ಸಾಗಾಣಿಕೆ ವೆಚ್ಚದ ಅನುದಾನವನ್ನು ರಾಜ್ಯದ 16 ಜಿಲ್ಲೆಗಳಿಗೆ 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ :** ಅಧಿಕೃತ ಜ್ಞಾಪನ ಸಂ. ಎಫ್‌ಡಿ/15/ಬಿಪಿಇ/2007, ಬೆಂಗಳೂರು, ದಿನಾಂಕ 31ನೇ ಜುಲೈ 2007.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು 2007–08ನೇ ಸಾಲಿನಲ್ಲಿ ರಾಜ್ಯದ 16 ಜಿಲ್ಲೆಗಳಿಗೆ ಆಹಾರಧಾನ್ಯವನ್ನು ಬಿಡುಗಡೆಗೊಳಿಸಿದ್ದು, ಸದರಿ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಒದಗಿಸಲಾದ ಅನುದಾನದ ಕೊರತೆಯಿಂದಾಗಿ 2007–08ನೇ ಸಾಲಿನಲ್ಲಿ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚದ ಬಾಬ್ತು ಅನುದಾನವನ್ನು ಬಿಡುಗಡೆಗೊಳಿಸಲು ಸಾಧ್ಯವಾಗಿರುವುದಿಲ್ಲ. ಈ ಹಿಂದೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಆಹಾರ ಧಾನ್ಯಗಳ ಸಾಗಾಣಿಕೆ ವೆಚ್ಚಕ್ಕಾಗಿ ಜಿಲ್ಲೆಗಳಿಗೆ ಬಿಡುಗಡೆಗೊಳಿಸಲಾದ ಅನುದಾನವು ಬಳಕೆಯಾದ ಬಳಿಕವು ಬಾಕಿ ಉಳಿದುಕೊಂಡಿದ್ದು ಸದರಿ ಲಭ್ಯವಿರುವ ಅನುದಾನ ಸೇರಿ ಸಾಗಾಣಿಕೆ ವೆಚ್ಚವನ್ನು ಭರಿಸಲು ಬೇಕಾಗುವ ಒಟ್ಟು ರೂ. 2,76,83,205–00ಗಳ ಅನುದಾನದ ಮಾಹಿತಿಯನ್ನು ಜಿಲ್ಲಾ ಪಂಚಾಯತಿಗಳಿಂದ ಪಡೆಯಲಾಗಿರುತ್ತದೆ. ಸಾಗಾಣಿಕೆ ವೆಚ್ಚವನ್ನು ಮೂರು ಹಂತಗಳ ಮೂಲಕ ಪಾವತಿ ಮಾಡುವುದರ ಬದಲಾಗಿ ಜಿಲ್ಲಾ ಪಂಚಾಯತಿಯ ಮೂಲಕ ಪಾವತಿ ಮಾಡುವುದು ಅನುಕೂಲವಾಗುವ ಅವಶ್ಯಕತೆ ಕಂಡು ಬಂದಿರುವುದರಿಂದ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 16 ಎಸ್‌ಜಿಆರ್ 2007, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2007–08ನೇ ಸಾಲಿನಲ್ಲಿ ಕೇಂದ್ರದಿಂದ ರಾಜ್ಯಕ್ಕೆ ಬಿಡುಗಡೆ ಮಾಡಲಾದ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚಕ್ಕಾಗಿ ಒಟ್ಟು ರೂ. 2,76,83,205–00 ಗಳನ್ನು (ರೂ. ಎರಡು ಕೋಟಿ ಎಪ್ಪತ್ತಾರು ಲಕ್ಷ ಎಂಬತ್ತಮೂರು ಸಾವಿರದ ಇನ್ನೂರ ಐದು ಮಾತ್ರ) ಅನುಬಂಧದಲ್ಲಿ ತೋರಿಸಿದಂತೆ ರಾಜ್ಯದ 16 ಜಿಲ್ಲಾ ಪಂಚಾಯತಿಗಳಿಗೆ ಪ್ರಚಲಿತ ವರ್ಷದ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಿದೆ.

ಜಿಲ್ಲಾಧಿಕಾರಿಗಳು ಟೆಂಡರ್ ದರದಲ್ಲಿ ನಿರ್ಧರಿಸಿದ ಸಾಗಾಣಿಕೆ ವೆಚ್ಚದ ಹಣವನ್ನು ಮತ್ತು ಪ್ರತಿ ಕ್ವಿಂಟಾಲಿಗೆ ತಗಲುವ ರೂ. 13/–ಗಳ ಸೇವಾ ವೆಚ್ಚವನ್ನು ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಇವರಿಗೆ ಭಾರತ ಆಹಾರ ನಿಗಮದ ಮಳಿಗೆಗಳಿಂದ ಎತ್ತುವಳಿ ಹಾಗೂ ಸಾಗಾಣಿಕೆ ಮಾಡಿದ ಆಹಾರಧಾನ್ಯಗಳ ಪ್ರಮಾಣಕ್ಕೆ ಅನುಸಾರವಾಗಿ ಪಾವತಿಸಲು ರಾಜ್ಯದ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮದವರಿಗೆ ಸಾಗಾಣಿಕೆ ವೆಚ್ಚದ ಬಾಬ್ತನ್ನು ಸರಾಗವಾಗಿ ಪಾವತಿ ಮಾಡಲು ಕ್ರಮ ಕೈಗೊಳ್ಳುವ ಸಲುವಾಗಿ 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2505–60–196–6–04–300, (ಯೋಜನೆ)ರಡಿ ಒದಗಿಸಿರುವ ಅನುದಾನದಿಂದ ಬಿಡುಗಡೆಗೊಳಿಸಲಾಗಿದೆ.

ಪ್ರಸ್ತಾಪಿತ ವೆಚ್ಚವನ್ನು ಲೆಕ್ಕಶೀರ್ಷಿಕೆ "2505–ಗ್ರಾಮೀಣ ಉದ್ಯೋಗ–60–ಇತರೆ ಕಾರ್ಯಕ್ರಮಗಳು–196–ಜಿಲ್ಲಾ ಪಂಚಾಯತಿಗಳಿಗೆ ಸಹಾಯಕ–6–ಜಿಲ್ಲಾ ಪಂಚಾಯತ್ ಕೇಂದ್ರ ಪುರಸ್ಕೃತ ಯೋಜನೆ–04–ರಾಜ್ಯ ಉದ್ಯೋಗ ಭರವಸೆ ಯೋಜನೆ–300–ಒಟ್ಟು ಜಿಲ್ಲಾ ಪಂಚಾಯತಿ (2505–60–196–6–04–300) 2008–09 (ಯೋಜನೆ)"ರಡಿ ಭರಿಸತಕ್ಕದ್ದು.

ಈಗ ಬಿಡುಗಡೆ ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳು ಆರ್ಥಿಕ ಇಲಾಖೆಯ ತಿದ್ದುಪಡಿ ಆದೇಶ ಸಂ. ಎಫ್‌ಡಿ–1/ಜೆಡ್‌ಪಿಎ/2007(ಪಿ–2) ದಿನಾಂಕ 26–4–2007ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ–1ಕ್ಕೆ ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು.

ಈಗ ಬಿಡುಗಡೆಗೊಳಿಸಲಾದ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚದ ಅನುದಾನವನ್ನು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಬಿಡುಗಡೆಗೊಳಿಸಲಾದ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚಕ್ಕಾಗಿ ಅನುದಾನವನ್ನು ಸರ್ಕಾರದಿಂದ ಬಿಡುಗಡೆಗೊಳಿಸಲಾಗುವುದಿಲ್ಲ. ಈಗ ಬಿಡುಗಡೆಗೊಳಿಸಲಾದ ಅನುದಾನವು ಅಂತಿಮವಾಗಿರುತ್ತದೆ. ತಮ್ಮ ಜಿಲ್ಲೆಗಳಿಗೆ 2001–02ನೇ ಸಾಲಿನಿಂದ ಈವರೆವಿಗೂ ಹಂತ ಹಂತವಾಗಿ ಸಾಗಾಣಿಕೆ ವೆಚ್ಚದ ಬಾಬ್ತು ಅನುದಾನವನ್ನು ಬಿಡುಗಡೆಗೊಳಿಸಿರುವುದರಿಂದ ಸದರಿ ಎಲ್ಲಾ ಸಾಲುಗಳಿಗೆ ಹಣಬಳಕೆ ಪ್ರಮಾಣ ಪತ್ರ ಮತ್ತು ಆಡಿಟ್ ವರದಿಯನ್ನು ಪ್ರತ್ಯೇಕವಾಗಿ ನಿರ್ವಹಿಸಿ ತಪ್ಪದೆ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/332/ ಪಿಬಿಎಸ್/08, ದಿನಾಂಕ 29–7–2008ರಲ್ಲಿ ಸಹಮತಿಸಿದಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ
ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ANNUXURE**

**G.O. No. RDP 16 SGR 2007, Bangalore, dated 1st August 2008**

**Release of funds towards transportation cost of foodgrains under SGRY during 2008-09 to Zilla Panchayats**

(Amount in Rs. )

| Sl. No. | Name of the District | Funds being released to ZPs under Head of Account 2505-60-196-6-04-300 |
|---|---|---|
| 1 | 2 | 3 |
| 1 | Bagalkot | 13,28,806 |
| 2 | Bangalore ® | 10,45,500 |
| 3 | Bangalore (U) | 12,81,631 |
| 4 | Bijapur | 18,40,000 |
| 5 | Chamarajanagar | 20,00,000 |
| 6 | D. Kannada | 1,95,000 |
| 7 | Dharwad | 9,50,000 |
| 8 | Gadag | 23,20,774 |

| 1 | 2 | 3 |
|---|---|---|
| 9 | Haveri | 12,87,000 |
| 10 | Kolar | 18,32,473 |
| 11 | Koppal | 14,22,439 |
| 12 | Mandya | 11,00,000 |
| 13 | Mysore | 20,00,000 |
| 14 | Tumkur | 60,56,061 |
| 15 | U. Kannada | 29,46,446 |
| 16 | Udupit | 77,075 |
| | **Total** | **2,76,83,205** |

P.R. 1153

**C.M. SHIROL**
Director (PPMU),
Project, Planning Monitoring Unit,
E/o Additional Secretary to Government,
Rural Development & Pan. Raj Dept.

**COMMERCE AND INDUSTRIES SECRETARIAT**

**Sub :** Proposal of M/s. Jamkhandi Sugars Ltd., for expansion of "White Crystal Sugal Plant from 2500 TCD to 5000 TCD with 12 Mw to 27 mw Co-generation" in the existing factory premises.

**Read :** Proceedings of the 10th State High Level Clearance Committee (SHLCC) meeting held on 28-8-2007.

**Preamble:**

M/s. Jamkhandi Sugars Ltd., for expansion of "White Crystal Sugar Plant from 2500 TCD to 5000 TCD with 12 Mw to 27 mw Co-generation" in the existing factory premises at Hirepadasalagi Post, Nanagur, Jamkhandi Taluk, Bagalkot District, with an investment of Rs. 100.70 crores. The project proposed to provide employment to about 300 persons. The Company had requested approval of the project for sanction of various Infrastructure facilities as well as incentives and concessions.

The State High Level Clearance Committee, (SHLCC) after detailed discussion of the project proposal of the said Company, approved the proposed of M/s. Jamkhandi Sugars Ltd., and recommended to grant Infrastructure facilities and to extend incentives & concessions. Hence the following order.

**Government Order No. CI 25 SPI 2008, Bangalore, Dated 13th March 2008**

In the circumstances explained above, Government is pleased to approve M/s. Jamkhandi Sugars Ltd., for expansion of "White Crystal Sugar Plant from 2500 TCD to 5000 TCD with 12 Mw to 27 mw Co-generation" in the existing factory premises at Hirepadasalagi Post, Nanagur, Jamkhandi Taluk, Bagalkot District, with an investment of Rs. 100.70 crores and extend the following infrastructure facilities, incentives and concessions.

**INFRASTRUCTURE FACILITIES:**

**Land:** The Committee resolved to permit the Company toespand their unit within their existing factory premises of 120 acres in at Hirepadasalagi Post, Nanagur, Jamkhandi Taluk, Bagalkot District.

**Power:** 1250 KVA power to be serviced by HESCOM.

**Water:** The requirement of water for the proposed expansion is to be met out of the existing allocation of 41.47 MCFT from Krishna River. The Company shall adopt rain water harvesting and water recycling.

**Incentives and Concessions:** As per New Industrial Policy 2006-2011.

**Environment:** The promoters were advised to obtain CFE from KSPCB & ECC from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of Employment to local people. A copy of human resource development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the Company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

**Others:**

- The promoter shall take all statutory and other necessary clearance and shall submit milestones/ progress in implementation of the project regularly, which will be monitored buy the Departments concerned.

This approval is valid for a period of two years from the date of issue.

By order and in the name of the President of India,

PR. 627

**K.R. CHANDRAMMA**

Desk Officer (Technical Cell)

Commerce & Industries Department.

**ಸಹಕಾರ ಸಚಿವಾಲಯ**

**ವಿಷಯ :** ಸಹಕಾರಿ ಸಂಸ್ಥೆಗಳಿಂದ ರೈತರು ಪಡೆದಿರುವ ಕೃಷಿ ಸಾಲಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಒ 55 ಸಿಎಲ್ಎಸ್ 2007, ದಿನಾಂಕ 29–3–2007.
2. ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007, ದಿನಾಂಕ 16–4–2007,
3. ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007, ದಿನಾಂಕ 15–5–2007.
4. ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007, ದಿನಾಂಕ 1–6–2007.
5. ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007, ದಿನಾಂಕ 16–8–2007 ಮತ್ತು 21–8–2007.
6. ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007, ದಿನಾಂಕ 1–12–2007.
7. ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007, ದಿನಾಂಕ 28–3–2008.
8. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಸಿಆರ್‌ಡಿ 77 ಕೆಎಂಇ 8, 2007–08, ದಿನಾಂಕ 2–1–2008 ಮತ್ತು 31–1–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಪತ್ತಿನ ಸಹಕಾರ ಸಂಸ್ಥೆಗಳಿಂದ ದಿನಾಂಕ 1–2–2006 ರಿಂದ ಈಚೆಗೆ 50,000 ರೂ.ಗಳವರೆಗೆ ಬೆಳೆ ಸಾಲ ಪಡೆದಿದ್ದು ಮತ್ತು ದಿನಾಂಕ 31–12–2006 ರವರೆಗೆ ಬಾಕಿ ಉಳಿಸಿಕೊಂಡಿದ್ದ ಎಲ್ಲಾ ರೈತರಿಗೂ 25,000 ರೂಪಾಯಿಗಳ ಮಿತಿಗೆ ಒಳಪಟ್ಟು ಬೆಳೆ ಸಾಲವನ್ನು ಮನ್ನಾ ಮಾಡಲು ಮತ್ತು ತತ್ಸಂಬಂಧದ ನಷ್ಟವನ್ನು ಸಹಕಾರಿ ಸಂಸ್ಥೆಗಳಿಗೆ ಭರಿಸಿಕೊಡುವ ಸಲುವಾಗಿ 2006–07ನೇ ಸಾಲಿನ ಪೂರಕ ಅಂದಾಜುಗಳು (ಎರಡನೆ ಹಾಗೂ ಅಂತಿಮ ಕಂತು)ಗಳಲ್ಲಿ ಲೆಕ್ಕಶೀರ್ಷಿಕೆ "2425–00–107–2–46 (ಸಾಲಮನ್ನಾ)" ಅಡಿ 500.00 ಕೋಟಿ ರೂ.ಗಳನ್ನು (ಐದುನೂರು ಕೋಟಿ ರೂಪಾಯಿಗಳು ಮಾತ್ರ) ಮುಂಗಡವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (2)ರ ಆದೇಶದಲ್ಲಿ ಕೃಷಿ ಪತ್ತಿನ ಸಹಕಾರ ಸಂಘಗಳಿಂದ ದಿನಾಂಕ 1–2–2006ರಿಂದ ಈಚೆಗೆ 50,000 ರೂ.ಗಳವರೆಗೆ ಬೆಳೆ ಸಾಲ ಪಡೆದಿದ್ದ ಮತ್ತು ದಿನಾಂಕ 31–12–2006 ರವರೆಗೆ ಬಾಕಿ ಉಳಿಸಿಕೊಂಡಿದ್ದ ಎಲ್ಲಾ ರೈತರಿಗೂ 25,000 ರೂಪಾಯಿಗಳ ಮಿತಿಗೆ ಒಳಪಟ್ಟು ಬೆಳೆ ಸಾಲವನ್ನು ಮನ್ನಾ ಮಾಡಲು ಮತ್ತು 25,000–00 ರೂ.ಗಳಿಗಿಂತ ಹೆಚ್ಚಿನ ಸಾಲದ ಮೊತ್ತವನ್ನು ಬಡ್ಡಿರಹಿತವಾಗಿ ಮರುಪಾವತಿ ಮಾಡಲು ದಿನಾಂಕ 30–4–2007ರವರೆಗೆ ಅವಧಿಯನ್ನು ನಿಗದಿಪಡಿಸಲು ಹಾಗೂ ಈ ರೀತಿ

ಮನ್ನಾ ಮಾಡಿದ ಮೊತ್ತವನ್ನು ಸಹಕಾರಿ ಸಂಸ್ಥೆಗಳಿಗೆ ಭರಿಸಿಕೊಡಲು ಕೆಲವು ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ದಿನಾಂಕ 1–1–2006 ರಿಂದ ದಿನಾಂಕ 31–12–2006 ರವರೆಗೆ ಬೆಳೆ ಸಾಲ ಪಡೆದಿದ್ದ ಎಲ್ಲ ರೈತರಿಗೂ (ಸಾಲದ ಮೊತ್ತ ಎಷ್ಟೇ ಇದ್ದರೂ) 25,000 ರೂ.ಗಳವರೆಗಿನ ಸಾಲವನ್ನು ಬಡ್ಡಿ ಸಹಿತ ಮನ್ನಾ ಮಾಡಲು ಮತ್ತು ಸಾಲ ಮರುಪಾವತಿ ಅವಧಿಯನ್ನು ದಿನಾಂಕ 31–5–2007ರವರೆಗೆ ವಿಸ್ತರಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ ದಿನಾಂಕ 1–1–2006 ರಿಂದ ದಿನಾಂಕ 31–12–2006ರ ವರೆಗೆ ಬೆಳೆ ಸಾಲ ಪಡೆದಿದ್ದ ಎಲ್ಲ ರೈತರಿಗೂ (ಸಾಲದ ಮೊತ್ತ ಎಷ್ಟೇ ಇದ್ದರೂ) ರೂ. 25,000–00 ಗಳವರೆಗಿನ ಸಾಲವನ್ನು ಬಡ್ಡಿ ಸಹಿತ ಮನ್ನಾ ಮಾಡಿದ ಬಾಬ್ತು ಉಂಟಾದ ನಷ್ಟವನ್ನು ಸಹಕಾರಿ ಸಂಸ್ಥೆಗಳಿಗೆ ಭರಿಸಿ ಕೊಡಲು 2007–08ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "2425–00–107–2–46–ಸಾಲಮನ್ನಾ–059–ಇತರ ಖರ್ಚು (ಯೋಜನೇತರ)"ದಲ್ಲಿ ಈ ಉದ್ದೇಶಕ್ಕಾಗಿ ಒದಗಿಸಿದ್ದ ರೂ.500.00 ಕೋಟಿಗಳ ಪೈಕಿ ರೂ. 250.00 ಕೋಟಿಗಳನ್ನು ಮಾತ್ರ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (5)ರ ಆದೇಶದಲ್ಲಿ ದಿನಾಂಕ 1–1–2006 ರಿಂದ ದಿನಾಂಕ 31–12–2006ರ ವರೆಗೆ ಬೆಳೆ ಸಾಲ ಪಡೆದಿದ್ದ ಎಲ್ಲಾ ರೈತರಿಗೂ (ಸಾಲದ ಮೊತ್ತ ಎಷ್ಟೇ ಇದ್ದರೂ) ರೂ. 25,000.00ಗಳವರೆಗಿನ ಸಾಲವನ್ನು ಬಡ್ಡಿ ಸಹಿತ ಮನ್ನಾ ಮಾಡಿದ ಬಾಬ್ತು ಉಂಟಾದ ನಷ್ಟವನ್ನು ಸಹಕಾರಿ ಸಂಸ್ಥೆಗಳಿಗೆ ಭರಿಸಿ ಕೊಡಲು 2007–08ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "2425–00–107–2–46–ಸಾಲಮನ್ನಾ–106–ಸಹಾಯಧನ (ಯೋಜನೇತರ)" ದಲ್ಲಿ ಈ ಉದ್ದೇಶಕ್ಕಾಗಿ ಒದಗಿಸಲಾದ ಅನುದಾನದಲ್ಲಿ ಬಾಕಿ ಉಳಿದಿದ್ದ ರೂ. 250.00 ಕೋಟಿಗಳನ್ನು ಮತ್ತು ಅಲ್ಲದೆ 2007–08ನೇ ಸಾಲಿನ ಪೂರಕ ಅಂದಾಜುಗಳು (ಮೊದಲನೇ ಕಂತು) ಇದರಲ್ಲಿ ಲೆಕ್ಕಶೀರ್ಷಿಕೆ "2425–00–107–2–46–ಸಾಲಮನ್ನಾ–106–ಸಹಾಯಧನ (ಯೋಜನೇತರ)" ಅಡಿ ಒದಗಿಸಲಾದ ರೂ. 250.00 ಕೋಟಿಗಳನ್ನು ಒಟ್ಟು ರೂ. 500.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (6)ರ ಆದೇಶದಲ್ಲಿ 2007–08ನೇ ಸಾಲಿನ ಪೂರಕ ಅಂದಾಜು (ಮೊದಲನೇ ಕಂತು)ಗಳಲ್ಲಿ ಈ ಉದ್ದೇಶಕ್ಕಾಗಿ ಒದಗಿಸಿದ್ದ ರೂ. 750.00 ಕೋಟಿಗಳ ಪೈಕಿ ರೂ. 200.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (7)ರ ಆದೇಶದಲ್ಲಿ ದಿನಾಂಕ 1–1–2006 ರಿಂದ 31–12–2006ರ ಅವಧಿಯಲ್ಲಿ ರೈತರಿಗೆ ನೀಡಲಾದ ಕೃಷಿ ಸಾಲಗಳ ಮೇಲಿನ ಅಸಲು ಮತ್ತು ಬಡ್ಡಿ ಮನ್ನಾ ಬಾಬ್ತು ಉಂಟಾದ ನಷ್ಟವನ್ನು ಸಹಕಾರಿ ಸಂಸ್ಥೆಗಳಿಗೆ ಒದಗಿಸಿದ್ದ ರೂ. 750.00 ಕೋಟಿಗಳ ಪೈಕಿ ಬಾಕಿ ಉಳಿದಿದ್ದ ರೂ. 300.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (8)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2006–07ನೇ ಸಾಲಿನ ಬೆಳೆ ವಿಮೆ ಪರಿಹಾರದ ಹಣವನ್ನು ರೈತರಿಗೆ ಪಾವತಿಸುವ ಬಗ್ಗೆ ಹಾಗೂ ಈಗಾಗಲೇ ಮಂಜೂರಾಗಿ ಬಂದಿರುವ ಪರಿಹಾರದ ಹಣವನ್ನು ಯಾವ ಖಾತೆಗೆ ಜಮಾ ಮಾಡಬೇಕೆಂಬ ಬಗ್ಗೆ ಮಾರ್ಗದರ್ಶನವನ್ನು ನೀಡಬೇಕೆಂದು ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರು ಒದಗಿಸಿರುವ ಮಾಹಿತಿ ಪ್ರಕಾರ ವಿಮಾ ಕಂಪನಿಗಳಿಂದ ಪರಿಹಾರ ಪಡೆದಿರುವ 92359 ರೈತರಿಗೆ ಲಭ್ಯವಾಗಿರುವ ಒಟ್ಟು ಪರಿಹಾರದ ಮೊತ್ತ ರೂ. 26,52,02,248.95 ಇದ್ದು ಈ ಪೈಕಿ ರೂ. 25,000/–ಗಳಿಗಿಂತ ಕಡಿಮೆ ವಿಮೆ ಪಡೆದಿರುವ ರೈತರ ಮೊತ್ತ ರೂ. 22,94,72,791.26 ಹಾಗೂ ರೂ. 25,000/–ಗಳಿಗಿಂತ ಮೇಲ್ಪಟ್ಟು ವಿಮೆ ಪಡೆದಿರುವ ರೈತರ ಮೊತ್ತ ರೂ. 3,57,32,926.49 ಗಳಾಗಿದ್ದು ಈ ಮೊತ್ತದಲ್ಲಿ ರೈತರಿಗೆ ಹಿಂದಿರುಗಿಸಬೇಕಾಗಿರುವ ಮೊತ್ತ ರೂ. 1,35,59,905.46 ಎಂದು ಕಂಡುಬರುತ್ತದೆ.

ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಬೆಳೆ ವಿಮೆ ಪರಿಹಾರ ಮೊತ್ತದಲ್ಲಿ ರೂ. 1,35,59,905.00ಗಳನ್ನು ರೈತರಿಗೆ ಹಿಂದಿರುಗಿಸಿ ಉಳಿದ ಮೊತ್ತ ರೂ. 25,16,45,812.00ಗಳನ್ನು ಸಾಲ ಮನ್ನಾ ಸೌಲಭ್ಯಕ್ಕಾಗಿ ಹೊಂದಾಣಿಕೆ ಮಾಡಿಕೊಳ್ಳಲು ತೀರ್ಮಾನಿಸಲಾಗಿದೆ.

ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 50 ಸಿಎಲ್ಎಸ್ 2007(ಭಾ–2), ಬೆಂಗಳೂರು, ದಿನಾಂಕ: 25ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಲಗತ್ತಿಸಿರುವ ಅನುಬಂಧದ ಪ್ರಕಾರ ವಿಮಾ ಕಂಪನಿಗಳಿಂದ ಪ್ರಾಪ್ತವಾಗಿ ಡಿ.ಸಿ.ಸಿ. ಬ್ಯಾಂಕುಗಳ ಖಾತೆಯಲ್ಲಿರುವ ಬೆಳೆ ವಿಮೆ ಪರಿಹಾರ ಮೊತ್ತದಲ್ಲಿ ರೂ. 1,35,59,905.00 (ಒಂದು ಕೋಟಿಯ ಮೂವತ್ತೈದು ಲಕ್ಷದ ಐವತ್ತೊಂಬತ್ತು ಸಾವಿರದ ಒಂಬೈನೂರ ಐದು ರೂಪಾಯಿಗಳು ಮಾತ್ರ)ಗಳನ್ನು ರೈತರಿಗೆ ಹಿಂದಿರುಗಿಸಲು ಹಾಗೂ ರೂ. 25,16,45,812.00 (ಇಪ್ಪತ್ತೈದು ಕೋಟಿಯ ಹದಿನಾರು ಲಕ್ಷದ ನಲವತ್ತೈದು ಸಾವಿರದ ಎಂಟುನೂರ ಹನ್ನೆರಡು ರೂಪಾಯಿಗಳು ಮಾತ್ರ)ಗಳನ್ನು ಸಾಲ ಮನ್ನಾ ಬಾಬ್ತು ಸರ್ಕಾರದಿಂದ ಬಿಡುಗಡೆ ಮಾಡಬೇಕಾದ ಮೊತ್ತಕ್ಕೆ ಹೊಂದಾಣಿಕೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ. ಅಂತಹ ಹೊಂದಾಣಿಕೆಯನ್ನು ಡಿ.ಸಿ.ಸಿ. ಬ್ಯಾಂಕುಗಳು ನಿಖರವಾಗಿ ಮಾಡಿಕೊಳ್ಳುವಂತೆ ಸಹಕಾರ ಸಂಘಗಳ ನಿಬಂಧಕರು ನೋಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 209 ವೆಚ್ಚ–2/2008, ದಿನಾಂಕ 26–5–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಸಿಒ 50 ಸಿಎಲ್‌ಎಸ್ 2007, ದಿನಾಂಕ 25–6–2008 ಇದಕ್ಕೆ ಅನುಬಂಧ**

| ಕ್ರ. ಸಂ. | ಡಿ.ಸಿ.ಸಿ. ಬ್ಯಾಂಕಿನ ಹೆಸರು | ಬೆಳೆವಿಮೆ ಪರಿಹಾರ ಪಡೆದಂತಹ ರೈತರ ಸಂಖ್ಯೆ | ಬ್ಯಾಂಕಿಗೆ ಪ್ರಾಪ್ತವಾದ ಬೆಳೆವಿಮೆ ಪರಿಹಾರ ಮೊತ್ತ | ರೂ. 25,000.00 ಗಳಿಗಿಂತ ಕಡಿಮೆ ವಿಮೆ ಪಡೆದ ರೈತರ ಸಾಲ ಮನ್ನಾ ಬಾಬ್ತು ಹೊಂದಾಣಿಕೆ | | ರೂ. 25,000.00 ಗಳಿಗಿಂತ ಕಡಿಮೆ ವಿಮೆ ಪಡೆದ ರೈತರ ಸಾಲ ಮನ್ನಾ ಬಾಬ್ತು ಹೊಂದಾಣಿಕೆ | | ರೈತರಿಗೆ ಹಿಂತಿರುಗಿಸ ಬೇಕಾದ ಮೊತ್ತ |
|---|---|---|---|---|---|---|---|---|
| | | | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | |
| 1 | 2 | 3 | 4 | 5 | 6 | 7 | 8 | 9 |
| 1 | ದಕ್ಷಿಣ ಕನ್ನಡ | – | – | – | – | – | – | – |
| 2 | ಬೆಳಗಾಂ | – | – | – | – | – | – | – |
| 3 | ಕೊಡಗು | – | – | – | – | – | – | – |
| 4 | ರಾಯಚೂರು | 9213 | 3378167.00 | 9053 | 28568529.00 | 160 | 4000000.00 | 1224107.00 |
| 5 | ಮೈಸೂರು | 2999 | 4603405.00 | 2999 | 4603405.00 | – | – | – |
| 6 | ಧಾರವಾಡ | 3039 | 4930700.00 | 3039 | 4930700.00 | – | – | 3285956.47 |
| 7 | ಬಾಗಲಕೋಟೆ | 2627 | 7965336.91 | 2627 | 7965336.91 | – | – | – |
| 8 | ಮಂಡ್ಯ | – | – | – | – | – | – | – |
| 9 | ಬೆಂಗಳೂರು | 35 | 37959.00 | 35 | 37959.00 | – | – | – |
| 10 | ಬಳ್ಳಾರಿ | 1527 | 11609803.83 | 1463 | 9429546.63 | 64 | 2180257.00 | – |
| 11 | ಬಿಜಾಪುರ | 1123 | 6217877.25 | 1101 | 5389158.99 | 22 | 517830.50 | 310887.76 |
| 12 | ಚಿಕ್ಕಮಗಳೂರು | 8 | 16576.26 | 8 | 16576.26 | – | – | – |
| 13 | ಕೋಲಾರ | – | – | – | – | – | – | – |
| 14 | ಹಾಸನ | – | – | – | – | – | – | – |
| 15 | ಬೀದರ್ | 43635 | 37913000.00 | 43635 | 37913000.00 | – | – | – |
| 16 | ಉತ್ತರ ಕನ್ನಡ | 526 | 140009.00 | 526 | 14009.00 | – | – | – |
| 17 | ಚಿತ್ರದುರ್ಗ | 1701 | 8865115.83 | 1699 | 8810389.83 | 2 | 50000.00 | 4726.00 |
| 18 | ದಾವಣಗೆರೆ | 4642 | 16563633.52 | 4591 | 14752050.31 | 51 | 1225000.00 | 586583.21 |
| 19 | ಗುಲ್ಬರ್ಗಾ | 14674 | 103055000.00 | 14168 | 84137000.00 | 506 | 12650000.00 | 6268000.00 |
| 20 | ಶಿವಮೊಗ್ಗ | 3967 | 6087119.00 | 3966 | 6048999.00 | 1 | 30898.00 | 7232.00 |
| 21 | ತುಮಕೂರು | 2643 | 23407546.35 | 2465 | 16730131.33 | 178 | 4805002.00 | 1872413.02 |
| | **ಒಟ್ಟು** | **92359** | **265202248.95** | **91375** | **229472791.26** | **984** | **22173021.03** | **13559905.46** |

ಪಿ.ಆರ್. 1046

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆರ್.ವಿ. ಶ್ರೀರಾಮರೆಡ್ಡಿ, 4ನೇ ಅಪರ ಸರ್ಕಾರಿ ಅಭಿಯೋಜಕರು, 3ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಸಿಸಿಹೆಚ್-25, ಬೆಂಗಳೂರು ನಗರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ-I ಸಂ. ಲಾ 15 ಪಿಪಿಇ 83, ದಿನಾಂಕ 27-1-1984.
2. ಸರ್ಕಾರದ ಆದೇಶದ ಸಂ. ಲಾ 138 ಪಿಪಿಇ 84, ದಿನಾಂಕ 17/18-8-1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 24-4-2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ/ಲೆಕ್ಕ-1/23/08-09 ದಿನಾಂಕ 4-6-2008.

**ಪ್ರಸ್ತಾವನೆ :**

ಶ್ರೀ ಆರ್.ವಿ. ಶ್ರೀರಾಮರೆಡ್ಡಿ, 4ನೇ ಅಪರ ಸರ್ಕಾರಿ ಅಭಿಯೋಜಕರು, 3ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಸಿಸಿಹೆಚ್-25, ಬೆಂಗಳೂರು ನಗರ, ಇವರು ಮೇಲೆ ಓದಲಾದ (1)ರ ದಿನಾಂಕ 27-1-1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 20ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 3-2-1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 27-7-1951 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 17/18-8-1984ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರು ದಿನಾಂಕ 3-2-1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ಮತ್ತು ಸದರಿಯವರ ಜನ್ಮ ದಿನಾಂಕ 27-7-1951 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 32 ವರ್ಷ 6 ತಿಂಗಳು 6 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ನಿಯಮಾನುಸಾರ ನಿವೃತ್ತಿ ವೇತನಕ್ಕೆ, ಸದರಿಯವರಿಗೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಆದೇಶಿಸಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಆರ್.ವಿ. ಶ್ರೀರಾಮರೆಡ್ಡಿ, 4ನೇ ಅಪರ ಸರ್ಕಾರಿ ಅಭಿಯೋಜಕರು, 3ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಸಿಸಿಹೆಚ್-25, ಬೆಂಗಳೂರು ನಗರ ರವರು ದಿನಾಂಕ 3-2-1984ರಂದು ಸಹಾಯಕ ಸರ್ಕಾರಿ ಆಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ಅಧಿಕಾರಿಯ ಜನ್ಮ ದಿನಾಂಕ 27-7-1951 ಆಗಿರುತ್ತದೆ. ಸದರಿ ಅಧಿಕಾರಿಯು, ಅವರ 32 ವರ್ಷ 6 ತಿಂಗಳು 6 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಎರಡು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿ ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 259 ಪಿಪಿಇ 2008, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2008.**

ಶ್ರೀ ಆರ್.ವಿ. ಶ್ರೀರಾಮರೆಡ್ಡಿ, 4ನೇ ಅಪರ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ) ರೀತ್ಯ ಎರಡು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. 794, ವೆಚ್ಚ-7/2008, ದಿನಾಂಕ 18-7-2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಎ.ಪಿ. ಫೀರೋಜ್ ಖಾನ್, ಸಹಾಯಕ ಸಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮದ್ದೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ. ಲಾ 225 ಪಿಪಿಇ 91, ದಿನಾಂಕ 14–6–1994.
2. ಸರ್ಕಾರದ ಪತ್ರದ ಸಂ. ಲಾ 221 ಪಿಪಿಇ 96(13), ದಿನಾಂಕ 18–11–1996.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 6–3–2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ./ಲೆಕ್ಕ–1/436/2007–08, ದಿನಾಂಕ 20–5–2008.

**ಪ್ರಸ್ತಾವನೆ :**

ಶ್ರೀ ಎ.ಪಿ. ಫಿರೋಜ್ ಖಾನ್, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮದ್ದೂರು, ಇವರು ಮೇಲೆ ಓದಲಾದ (1)ರ ದಿನಾಂಕ 14–6–1994ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 14ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 24–6–1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 1–6–1963 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 18–11–1996ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರು ದಿನಾಂಕ 24–6–1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ಮತ್ತು ಸದರಿಯವರ ಜನ್ಮ ದಿನಾಂಕ 1–6–1963 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 31ನೇ ವರ್ಷ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ 30 ವರ್ಷಗಳ ವಯಸ್ಸಿನ ನಂತರ ಸರ್ಕಾರಿ ಸೇವೆಗೆ ಸೇರಿದ ನೌಕರರಿಗೆ, ಅವರ ಜನ್ಮ ದಿನಾಂಕದಿಂದ ಸರ್ಕಾರಿ ಸೇವೆಗೆ ಸೇರಿದ ದಿನಾಂಕದವರೆಗಿನ ವ್ಯತ್ಯಾಸವನ್ನು ಹೆಚ್ಚುವರಿಯಾಗಿ ಅಥವಾ ಗರಿಷ್ಠ 4 ವರ್ಷಗಳ ಮಿತಿಗೆ ಒಳಪಟ್ಟ ಸೇವಾವಧಿಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರಿಸುವ ಅವಕಾಶವಿರುತ್ತದೆ. ಆದ್ದರಿಂದ, ನಿಯಮಾನುಸಾರ ನಿವೃತ್ತಿ ವೇತನಕ್ಕೆ, ಸದರಿಯವರಿಗೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಆದೇಶಿಸಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಎ.ಪಿ. ಫಿರೋಜ್ ಖಾನ್, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಲಯ, ಮದ್ದೂರು ರವರು ದಿನಾಂಕ 24–6–1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ಅಧಿಕಾರಿಯ ಜನ್ಮ ದಿನಾಂಕ 1–6–1963 ಆಗಿರುತ್ತದೆ. ಸದರಿ ಅಧಿಕಾರಿಯು, ಅವರ 31 ವರ್ಷ 0 ತಿಂಗಳೂ 23 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಒಂದು ವರ್ಷದ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿ ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 237 ಪಿಪಿಇ 2008, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2008.**

ಶ್ರೀ ಎ.ಪಿ. ಫಿರೋಜ್ ಖಾನ್, ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಒಂದು ವರ್ಷದ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 722, ವೆಚ್ಚ–7/2008, ದಿನಾಂಕ: 21–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವವ್ಯಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಹೆಚ್.ಎಂ. ಜವಳಿ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–I ಸಂ: ಲಾ 15 ಪಿಪಿಇ 83, ದಿನಾಂಕ 5–4–1984.
2. ಸರ್ಕಾರದ ಆದೇಶದ ಸಂ: ಲಾ 146 ಪಿಪಿಇ 86, ದಿನಾಂಕ 16/17–8–1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 19–4–2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಲೆಕ್ಕ–1/22/08–09, ದಿನಾಂಕ 19–5–2008.

**ಪ್ರಸ್ತಾವನೆ :**

ಶ್ರೀ ಹೆಚ್.ಎಂ. ಜವಳಿ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ, ಇವರು ಮೇಲೆ ಓದಲಾದ (1)ರ ದಿನಾಂಕ 5–4–1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 3ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 16–4–1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 1–1–1951 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 16/17–8–1984ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರು ದಿನಾಂಕ 16–4–1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ಮತ್ತು ಸದರಿಯವರ ಜನ್ಮ ದಿನಾಂಕ 1–1–1951 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 33 ವರ್ಷ 3 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. 30 ವರ್ಷದ ನಂತರ ಸರ್ಕಾರಿ ಸೇವೆಗೆ ನೇಮಕಾತಿ ಹೊಂದಿದ್ದರೆ, ನೇಮಕಾತಿ ದಿನಾಂಕದ ನಿಕಟಪೂರ್ವದ ಜನ್ಮ ದಿನಾಂಕದಂದು ಆಗಿರುವ ವಯಸ್ಸು ಮತ್ತು 30 ವರ್ಷಗಳು, ಇವುಗಳ ನಡುವಿನ ಅಂತರದ ಅವಧಿಯನ್ನು ಕರ್ನಾಟಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಬೇಕಾಗಿರುತ್ತದೆ. ಆದ್ದರಿಂದ, ನಿಯಮಾನುಸಾರ 3 ವರ್ಷ 3 ತಿಂಗಳ ಅವಧಿಯನ್ನು, ಸದರಿಯವರ ಅರ್ಹತಾದಾಯಕ ಸೇವೆಗೆ, ಹೆಚ್ಚುವರಿಯಾಗಿ ಸೇರ್ಪಡೆ ಮಾಡಲು ಆದೇಶಿಸಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಹೆಚ್.ಎಂ. ಜವಳಿ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ ರವರು ದಿನಾಂಕ 16–4–1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ಅಧಿಕಾರಿಯ ಜನ್ಮ ದಿನಾಂಕ 1–1–1951 ಆಗಿರುತ್ತದೆ. ಸದರಿ ಅಧಿಕಾರಿಯು, ಅವರ 33 ವರ್ಷ 3 ತಿಂಗಳು 15 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಮೂರು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿ ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 238 ಪಿಪಿಇ 2008, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2008.**

ಶ್ರೀ ಹೆಚ್.ಎಂ. ಜವಳಿ, ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಮೂರು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 728, ವೆಚ್ಚ–7/2008, ದಿನಾಂಕ 21–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1293

**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವವ್ಯಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ಶಿಕ್ಷಣ ಸಚಿವಾಲಯ**

**ಸಂಖ್ಯೆ ಇಡಿ 436 ಇಎಸ್‌ಡಬ್ಲ್ಯೂ 2008, ಬೆಂಗಳೂರು, ದಿನಾಂಕ 10ನೇ ಸೆಪ್ಟೆಂಬರ್ 2008**

**ಸುತ್ತೋಲೆ**

**ವಿಷಯ :** ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದ ಶ್ರೀ ಕೆ.ಜಿ. ಬಾಲಕೃಷ್ಣನ್‌ರವರು "ಲಕ್ಷಾಂತರ ಸಸಿಗಳನ್ನು ನೆಡುವ" ಕಾರ್ಯಕ್ರಮಕ್ಕೆ ಚಾಲನೆ ನೀಡಿರುವ ಬಗ್ಗೆ.

**ಓದಲಾಗಿದೆ:** ದಿನಾಂಕ 6–9–2008ರ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಯವರು ಸರ್ಕಾರದ ಪ್ರಧಾನ ಕಾರ್ಯದರ್ಶಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇವರಿಗೆ ಬರೆದ ಅ.ಸ. ಪತ್ರ.

1) ಕರ್ನಾಟಕ ರಾಜ್ಯ ಕಾನೂನು ಸೇವೆ ಪ್ರಾಧಿಕಾರ ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ಕಾನೂನು ಸೇವೆಗಳ ಸಮಿತಿಯು ಕೆಲವೊಂದು ಕಾನೂನು ಸಾಕ್ಷರತೆ ಕಾರ್ಯಕ್ರಮಗಳನ್ನು ಪರಿಸರ ಸಂರಕ್ಷಣೆಯೂ ಸೇರಿದಂತೆ ಸಂಘಟಿಸುತ್ತಿವೆ. ಪರಿಸರ ನಾಶದಿಂದ ಯಾವಾಗಲು ಬಡವರು ಮತ್ತು ಹಿಂದುಳಿದ ವರ್ಗದ ಜನರೇ ಹೆಚ್ಚಾಗಿ ಘಾಸಿಗೆ ಒಳಗಾಗುತ್ತಾರೆಂದು ಉಲ್ಲೇಖಿತ ಪತ್ರದಲ್ಲಿ ಅಭಿಪ್ರಾಯಿಸಿರುತ್ತಾರೆ. ಪತ್ರದ ಪ್ರತಿಯನ್ನು ಸಿದ್ಧ ಉಲ್ಲೇಖಕ್ಕಾಗಿ ಇದರೊಂದಿಗೆ ಲಗತ್ತಿಸಿದೆ. ಅದರಲ್ಲಿನ ವಿಷಯವು ಸ್ವಯಂ ವೇದ್ಯವಾಗಿದೆ.

2) ಜಾಗತೀಕರಣ ಮತ್ತು ಕೈಗಾರಿಕೀಕರಣದಿಂದಾಗಿ ಜೀವಿ ಮತ್ತು ಪರಿಸರ ನಾಶವಾಗುತ್ತಿದ್ದು ಮುಂದಿನ ಜನಾಂಗಕ್ಕೋಸ್ಕರ ಅದನ್ನು ತಡೆಗಟ್ಟುವುದು ಮತ್ತು ಅಭಿವೃದ್ಧಿಪಡಿಸುವುದು ಅಗತ್ಯವಾಗಿದೆ. ಈ ಯೋಜನೆಯನ್ನು ಕಾರ್ಯಗತಗೊಳಿಸುವ ದೃಷ್ಟಿಯಿಂದ ಜಿಲ್ಲಾ ಕಾನೂನು ಸೇವೆ ಪ್ರಾಧಿಕಾರಗಳು ಮತ್ತು ತಾಲ್ಲೂಕು ಕಾನೂನು ಸೇವೆಗಳ ಸಮಿತಿಗಳು ರಾಜ್ಯಾದ್ಯಂತ ಲಕ್ಷಾಂತರ ಸಸಿಗಳನ್ನು ನೆಡುವ ಕಾರ್ಯಕ್ರಮ ಹಮ್ಮಿಕೊಂಡಿವೆ.

3) ಈ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಶಿಕ್ಷಣ ಇಲಾಖೆಯ ವತಿಯಿಂದ ಸಹ ಜಾರಿಗೊಳಿಸಬೇಕಾಗಿರುವ ಕಾರಣ ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಜಾರಿಗೊಳಿಸುವ ಸಲುವಾಗಿ ರಾಜ್ಯದ ಎಲ್ಲಾ ಜಿಲ್ಲಾ ಉಪ ನಿರ್ದೇಶಕರುಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲಾ ಮುಖ್ಯೋಪಾಧ್ಯಾಯರುಗಳು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರಗಳಿಗೆ ಮತ್ತು ತಾಲ್ಲೂಕು ಕಾನೂನು ಸೇವೆಗಳ ಸಮಿತಿಗಳಿಗೆ ಸಹಕರಿಸುವಂತೆ ಮತ್ತು ಸಮನ್ವಯ ಸಾಧಿಸುವಂತೆ ಸೂಚಿಸಿದೆ. ಅಲ್ಲದೆ ತೋಟಗಾರಿಕೆ ಇಲಾಖೆಯಿಂದ, ಸಾಮಾಜಿಕ ಅರಣ್ಯ ಇಲಾಖೆಯಿಂದ ಮತ್ತು ಅರಣ್ಯ ಇಲಾಖೆಗಳಿಂದ ಸಸಿಗಳನ್ನು ಪಡೆದು ಶಾಲಾ ಆವರಣದಲ್ಲಿ ಮತ್ತು ಶಾಲಾ ಮೈದಾನಗಳಲ್ಲಿ ತಕ್ಷಣ ನೆಡುವ ಕಾರ್ಯಕ್ರಮ ಹಮ್ಮಿಕೊಳ್ಳುವಂತೆ ಸೂಚಿಸಲಾಗಿದೆ.

**ಸಿ.ಎಸ್. ಸುರಂಜನ**

ಪಿ.ಆರ್.1318

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರೌಢ ಶಿಕ್ಷಣ)

**ಸಹಕಾರ ಸಚಿವಾಲಯ**

**ವಿಷಯ :** ಅಮಾನತ್ ಸಹಕಾರ ಬ್ಯಾಂಕಿನ ದಾವಾ ಪ್ರಕರಣಗಳಲ್ಲಿ ಪಾವತಿಸುವ ಫೀ ಹಂಚಿಕೆ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಸಇ 421 ಎಸಸೇ 2005, ದಿನಾಂಕ 7–1–2006.
2. ಸರ್ಕಾರದ ಆದೇಶ ಸಂಖ್ಯೆ ಸಇ 234 ಸಿಎಲ್‌ಎಂ 2007, ದಿನಾಂಕ 28–1–2008.
3. ಅಮಾನತ್ ಸಹಕಾರ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಪತ್ರ ಸಂಖ್ಯೆ ಸಿಓ. ಪಿಇಆರ್.421/2008–09, ದಿನಾಂಕ 5–8–2008.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳದಲ್ಲಿ ವ್ಯಾಜ್ಯಗಳ ಶೀಘ್ರ ವಿಲೇವಾರಿಗಾಗಿ ರಚಿಸಲಾಗಿರುವ ಬೆಂಗಳೂರು ಮತ್ತು ಹುಬ್ಬಳ್ಳಿ ನ್ಯಾಯಾಲಯಗಳ ಸಂಬಂಧದಲ್ಲಿ ದಾವಾ ಫೀ ಅನ್ನು ಹಂಚಿಕೆ ಮಾಡುವ ಬಗ್ಗೆ ಈಗಾಗಲೇ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮಂಜೂರಾತಿಯನ್ನು ನೀಡಿದೆ. ಸಾದಿಲ್ವಾರು ವೆಚ್ಚಕ್ಕಾಗಿ ಪ್ರತಿ ದಾವಾ ಪ್ರಕರಣದಲ್ಲಿ ರೂ. 120.00 ಮತ್ತು ಒಬ್ಬರಿಗಿಂತ ಹೆಚ್ಚಿನ ಪ್ರತಿಯೊಬ್ಬ ಎದುರುದಾರರಿಗೆ ರೂ. 25.00 ರಂತೆ ಪಾವತಿಸತಕ್ಕದೆಂದು ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ ತಿಳಿಸಲಾಗಿದೆ. ಅಮಾನತ್ ಸಹಕಾರ ಬ್ಯಾಂಕಿನ ದಾವೆಗಳ ಇತ್ಯರ್ಥಕ್ಕಾಗಿ ರಚಿತವಾಗಿರುವ ಸಹಕಾರ ಸಂಘಗಳ ಜಂಟಿ ನಿಬಂಧಕರ (ನಿಯಮ 441) ನ್ಯಾಯಾಲಯದಲ್ಲಿ ಸದರಿ ಬ್ಯಾಂಕಿನ ದಾವೆಗಳು ಇತ್ಯರ್ಥವಾದಲ್ಲಿ ಸಂಗ್ರಹವಾದ ದಾವಾ ಫೀ ಮೊತ್ತವನ್ನು ಮತ್ತು ಇತರೆ ವೆಚ್ಚವನ್ನು ಅಮಾನತ್ ಸಹಕಾರ ಬ್ಯಾಂಕಿನ ಖಾತೆಗೆ ಜಮಾ ಮಾಡಬೇಕೆಂದು ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಮೇಲೆ ಓದಲಾದ (3)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪಟ್ಟಣ ಸಹಕಾರ ಬ್ಯಾಂಕುಗಳ ದಾವೆಗಳ ಇತ್ಯರ್ಥದಲ್ಲಿ ಸಂಗ್ರಹವಾದ ದಾವಾ ಫೀ ಮೊತ್ತದಲ್ಲಿ ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇದಕ್ಕೆ ಶೇ. 65ರಷ್ಟು ಮತ್ತು ಸರ್ಕಾರಕ್ಕೆ ಶೇ. 35ರಷ್ಟು ವಿಭಜಿಸಲು ಮಂಜೂರಾತಿಯನ್ನು ನೀಡಿದಂತೆ ಅಮಾನತ್ ಸಹಕಾರ ಬ್ಯಾಂಕಿನ ದಾವಾ ಪ್ರಕರಣಗಳಲ್ಲಿ ಸಂಗ್ರಹವಾಗುವ ಫೀ ಮೊತ್ತವನ್ನೂ ಅಮಾನತ್ ಸಹಕಾರ ಬ್ಯಾಂಕಿಗೆ ಶೇ. 65ರಷ್ಟು ಮತ್ತು ಸರ್ಕಾರಕ್ಕೆ ಶೇ. 35ರಷ್ಟನ್ನು ವಿಭಜಿಸಲು ಮತ್ತು ಸಾದಿಲ್ವಾರು ವೆಚ್ಚವನ್ನು ಅಮಾನತ್ ಸಹಕಾರ ಬ್ಯಾಂಕಿಗೆ ಪಾವತಿಸುವ ಬಗ್ಗೆ ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 150 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಮಾನತ್ ಸಹಕಾರ ಬ್ಯಾಂಕಿನ ದಾವಾ ಇತ್ಯರ್ಥಕ್ಕಾಗಿ ನಿಯೋಜಿತವಾಗಿರುವ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ಇವರ ಮುಂದೆ ದಾಖಲಿಸುವ ಪ್ರತಿ ದಾವಾ ಪ್ರಕರಣದಲ್ಲಿ ಸಂಗ್ರಹವಾಗುವ ದಾವಾ ಫೀ ಮೊತ್ತದಲ್ಲಿ ಅಮಾನತ್ ಸಹಕಾರ ಬ್ಯಾಂಕಿಗೆ ಶೇ. 65ರಷ್ಟು ಮತ್ತು ಸರ್ಕಾರಕ್ಕೆ ಶೇ. 35ರಷ್ಟನ್ನು ವಿಭಜಿಸಲು ಮತ್ತು ಸಾದಿಲ್ವಾರು ವೆಚ್ಚವನ್ನು ಅಮಾನತ್ ಸಹಕಾರ ಬ್ಯಾಂಕಿಗೆ ಪಾವತಿಸಲು ಸರ್ಕಾರವು ಮಂಜೂರಾತಿಯನ್ನು ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1319

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಸಂಪಿಗೆ ಗ್ರಾಮದಲ್ಲಿ ಬಿ.ಎಂ.ಶ್ರೀ. ಸ್ಮಾರಕ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಸಂಕಇ/196/ಕರಅ/2005, ದಿನಾಂಕ 7–1–2006.
2. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪತ್ರ ಸಂಖ್ಯೆ, ಕಸನಿ/22/ಸ್ಮಾರಕ/2001–02, ದಿನಾಂಕ 21–6–2008

**ಪ್ರಸ್ತಾವನೆ :**

ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಸಂಪಿಗೆ ಗ್ರಾಮದಲ್ಲಿ ಬಿ.ಎಂ.ಶ್ರೀ. ಸ್ಮಾರಕ ನಿರ್ಮಾಣಕ್ಕೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 10.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿತ್ತು. ಆ ಸ್ಮಾರಕಕ್ಕೆ ಉಳಿದ ಕಾಮಗಾರಿಗಳಿಗೆ ರೂ. 6.00 ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು ಕೋರಿರುತ್ತಾರೆಂದು ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸುತ್ತಾ, ಸಭಾಂಗಣ ಕಾಮಗಾರಿಗಳಿಗಾಗಿ ರೂ. 6.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಇದನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 1 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2008.**

ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಸಂಪಿಗೆ ಗ್ರಾಮದಲ್ಲಿ ನಿರ್ಮಿಸುತ್ತಿರುವ ಬಿ.ಎಂ.ಶ್ರೀ. ಸ್ಮಾರಕ ಭವನದ ಉಳಿದ ಕಾಮಗಾರಿಗಳಿಗೆ ತಗಲುವ ವೆಚ್ಚ ರೂ. 6.00 ಲಕ್ಷಗಳನ್ನು (ಆರು ಲಕ್ಷ ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಅವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿರುತ್ತದೆ.

1. ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಭರಿಸತಕ್ಕದ್ದು.
2. ಹಣವನ್ನು ಸದರಿ ಉದ್ದೇಶಕ್ಕೆ ಬಳಕೆಯಾಗಿರುವ ಕುರಿತು ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
3. ನಿರ್ಮಾಣ ಕಾಮಗಾರಿಯನ್ನು ಸಂಬಂಧಪಟ್ಟ ಕಾರ್ಯಪಾಲರ ಇಂಜಿನಿಯರ್ ಅವರ ಮೇಲುಸ್ತುವಾರಿಯಲ್ಲಿ ನಡೆಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–03–100 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ/804/ ಐಎಫ್(ಬಿಎ)/2008, ದಿನಾಂಕ 25–7–2008ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1312

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಿಗೆ ಹೊಸ ವಾಹನವನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ್ರಾ:ಕಾ: 2008–09, ದಿನಾಂಕ 23–6–2008.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂಕಇ 16 ಕೆಎಲ್ 2008, ದಿನಾಂಕ 10–6–2008.

3. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 69 ಶಿಸನೇ 2008, (1) ದಿನಾಂಕ 14–7–2008.

**ಪ್ರಸ್ತಾವನೆ :**

ಕಾರ್ಯದರ್ಶಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ 23–6–2008ರ ಪತ್ರದಲ್ಲಿ ಕನ್ನಡ ಅಭಿವೃದ್ಧಿಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದಲ್ಲಿ ಸಿಬ್ಬಂದಿ ಸಮೇತವಾಗಿ ವ್ಯಾಪಕ ಪ್ರವಾಸ ಮಾಡಬೇಕಾಗಿರುವ ಹಿನ್ನೆಲೆಯಲ್ಲಿ ಪ್ರಾಧಿಕಾರದಲ್ಲಿ ಹಾಲಿ ಇರುವ ಅಂಬಾಸಿಡರ್ ವಾಹನವು ಧೀರ್ಘ ಪ್ರವಾಸಕ್ಕೆ ಅನುಕೂಲವಾಗಿಲ್ಲದಿರುವುದರಿಂದ ಹೊಸ ಟೋಯೋಟಾ ಇನ್ನೋವಾ ವಾಹನವನ್ನು ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರಿಗೆ ಒದಗಿಸುವಂತೆ ಕೋರಿರುತ್ತಾರೆ. ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ 10–6–2008 ಹಾಗೂ 6–7–2008ರ ಅಧಿಸೂಚನೆಗಳಲ್ಲಿ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರಿಗೆ ಸಂಪುಟ ದರ್ಜೆ (ಕ್ಯಾಬಿನೆಟ್) ಸಚಿವರ ಸ್ಥಾನಮಾನವನ್ನು ನೀಡಲಾಗಿದೆ. ಆದ್ದರಿಂದ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ರವರು ಸಂಪುಟ ದರ್ಜೆ ಸಚಿವರ ಸ್ಥಾನಮಾನ ಹೊಂದಿರುವುದರಿಂದ ಈ ಕಾರನ್ನು ಹೊಂದಲು ಅರ್ಹರಾಗಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 22 ಕೆಎಲ್ 2008, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2008.**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಉಪಯೋಗಕ್ಕಾಗಿ ಒಂದು ಹೊಸ ಟೋಯೋಟಾ ಇನ್ನೋವಾ ಕಾರನ್ನು ರೂ. 9.00 ಲಕ್ಷಗಳ ಮಿತಿಯೊಳಗೆ (ರೂಪಾಯಿ ಒಂಭತ್ತು ಲಕ್ಷಗಳು ಮಾತ್ರ) ಖರೀದಿಸಲು ಸರ್ಕಾರದ ಅನುಮತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು 2008–09ನೇ ಸಾಲಿನ ಯೋಜನೇತರ ಲೆಕ್ಕಶೀರ್ಷಿಕೆ 2052–00–092–0–09 ರಡಿ ಭರಿಸತಕ್ಕದ್ದು. ಹಾಲಿ ಇರುವ ಅಂಬಾಸಿಡರ್ ಕಾರನ್ನು ನಿಯಮಾನುಸಾರ ಪರಿಶೀಲಿಸಿ ಪ್ರಾದೇಶಿಕ ಸಾರಿಗೆ ಆಯುಕ್ತರಿಂದ (ಆರ್.ಟಿ.ಒ.) ವರದಿ ಪಡೆದು ವಿಲೇಗೊಳಿಸಲು ತೀರ್ಮಾನಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಸಿ.ಆ.ಸು.ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಸಿಆಸುಇ 69 ಶಿಸನೇ 2008(1) ದಿನಾಂಕ 14–7–2008 ಹಾಗೂ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 1385 ವೆಚ್ಚ–5/2008, ದಿನಾಂಕ 4–8–2008ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1313

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಒಳಾಡಳಿತ ಸಚಿವಾಲಯ

**ಸಂಖ್ಯೆ ಒಇ 183 ಪೊಸಇ 2008, ಬೆಂಗಳೂರು, ದಿನಾಂಕ 9ನೇ ಸೆಪ್ಟೆಂಬರ್ 2008**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ ಒಇ 183 ಪೊಸಇ 2008, ದಿನಾಂಕ 29–8–2008 ರಲ್ಲಿಯ "ದಿನಾಂಕ 19–7–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆ" ಎಂಬುದರ ಬದಲು

"ದಿನಾಂಕ 19–8–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1300

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಾರ್ಮಿಕ ಸಚಿವಾಲಯ

**ವಿಷಯ :** ಕರ್ನಾಟಕ ಲೇಬರ್ ಇನ್ಸ್‌ಟಿಟ್ಯೂಟ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** 1. ಕಾರ್ಮಿಕ ಆಯುಕ್ತರ ಪತ್ರ ಸಂಖ್ಯೆ: ಉಕಾಅ (ಅಂಅಂ)/ಕೆಎಲ್ಐ/ಸಿಆರ್–1/2008–09, ದಿನಾಂಕ 28–7–2008.

**ಪ್ರಸ್ತಾವನೆ :**

2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2230–01–277–0–01–ಯೋಜನೆ–ಅಡಿಯಲ್ಲಿ ಕರ್ನಾಟಕ ಕಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಲು 65.68 ಲಕ್ಷ ರೂ.ಗಳ ಆಯವ್ಯಯ ಕಲ್ಪಿಸಲಾಗಿದೆ. ಕಾರ್ಮಿಕ ಆಯುಕ್ತರು ಮೇಲೆ ಓದಲಾದ ತಮ್ಮ ದಿನಾಂಕ 28–7–2008ರ ಪತ್ರದಲ್ಲಿ ಈ ಸಂಬಂಧ ಸಂಸ್ಥೆಯ ಸ್ಥಾಪನೆಯ ಧ್ಯೇಯ–ಉದ್ದೇಶಗಳನ್ನು ಕಳುಹಿಸಿರುತ್ತಾರೆ. ಸದರಿ ಸಂಸ್ಥೆಯ ಧ್ಯೇಯ–ಉದ್ದೇಶಗಳು ಕೆಳಕಂಡಂತಿವೆ:

1. ಕಾರ್ಮಿಕ ಇಲಾಖೆಯ ನಿರೀಕ್ಷಕರು/ಅಧಿಕಾರಿಗಳ, ಕಾರ್ಮಿಕ ಸಂಘಟನೆಗಳ ಪದಾಧಿಕಾರಿಗಳು ಮತ್ತು ಮಾಲೀಕರ ಸಾಮರ್ಥ್ಯವನ್ನು ಹೆಚ್ಚಿಸುವುದು.
2. ನಿರ್ದಿಷ್ಟ ವಿಷಯಗಳ ಬಗ್ಗೆ ಸಂಶೋಧನೆ/ಕಾರ್ಮಿಕ ಕಾಯ್ದೆಗಳ ತಿದ್ದುಪಡಿ.
3. ಕಾರ್ಮಿಕ ಇಲಾಖೆಯ ಚಟುವಟಿಕೆಗಳ ದಾಖಲಿಸುವಿಕೆ.
4. ಮಾಹಿತಿ ಪ್ರಸರಣ.
5. ಕರ್ನಾಟಕ ಲೇಬರ್ ಇನ್ಸ್‌ಟಿಟ್ಯೂಟ್‌ಗೆ ಮಾಹಿತಿಗಾಗಿ/ಸಲಹೆಗಾಗಿ ಬರುವ ನಿರ್ದಿಷ್ಟ ವಿಷಯಗಳು.
6. ಕಾರ್ಮಿಕ ವಿಷಯಗಳ ಬಗ್ಗೆ ಕಾರ್ಯಾಗಾರಗಳನ್ನು ವಿವಿಧ ಪಾಲುದಾರರಿಗೆ ಏರ್ಪಡಿಸುವುದು.
7. ಕಾರ್ಮಿಕ ಕಾಯ್ದೆಗಳ ಕೈಪಿಡಿಯನ್ನು ಪರಿಷ್ಕರಿಸಿ ಹೊರತರುವುದು. (Upgradation of Labour Manual)
8. ಸರ್ವೋಚ್ಚ ನ್ಯಾಯಾಲಯಗಳ, ಮಾನ್ಯ ಉಚ್ಚ ನ್ಯಾಯಾಲಯಗಳ ಕಾರ್ಮಿಕ ನ್ಯಾಯಾಧೀಕರಣದ ತೀರ್ಪುಗಳ ವಿಶ್ಲೇಷಣೆ ಹಾಗೂ ಅವುಗಳ ಜಾರಿಗೆ ಸಂಬಂಧಿಸಿದಂತೆ ಟಿಪ್ಪಣಿ ಸಿದ್ಧಪಡಿಸುವುದು.
9. ರಾಷ್ಟ್ರೀಯ ಮಟ್ಟದಲ್ಲಿ ವಿವಿಧ ಸಂಶೋಧನಾ ಕೇಂದ್ರಗಳ ಸಹಯೋಗದೊಂದಿಗೆ ಕಾರ್ಯಾಗಾರಗಳನ್ನು ಏರ್ಪಡಿಸುವುದು.

ಮೇಲ್ಕಂಡ ಮಾಹಿತಿಯೊಂದಿಗೆ ಕಾರ್ಮಿಕ ಇಲಖೆಯಲ್ಲಿ ಲೇಬರ್ ಇನ್ಸ್‌ಟಿಟ್ಯೂಟ್‌ನ್ನು ರಾಷ್ಟ್ರೀಯ ಕಾನೂನು ಶಾಲೆ (National Law School of India University) ಇವರ ಸಹಯೋಗದೊಂದಿಗೆ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಲಾಗುವುದು. ಆದ್ದರಿಂದ ಕರ್ನಾಟಕ ಲೇಬರ್ ಇನ್ಸ್‌ಟಿಟ್ಯೂಟ್‌ನ್ನು ರಾಷ್ಟ್ರೀಯ ಕಾನೂನು ಶಾಲೆ ಇವರ ಸಹಯೋಗದೊಂದಿಗೆ ಪ್ರಾರಂಭ ಮಾಡಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಈ ವಿಷಯವನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಎಲ್ಇಟಿ 2008, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2008**.

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ರಾಷ್ಟ್ರೀಯ ಕಾನೂನು ಶಾಲೆ (National Law School of India University) ಇವರ ಸಹಯೋಗದೊಂದಿಗೆ ಕಾರ್ಮಿಕ ಅಧ್ಯಯನ ವಿಷಯಗಳಿಗಾಗಿ ರಾಜ್ಯ ಸಂಸ್ಥೆಯನ್ನು ಅಂದರೆ ಕರ್ನಾಟಕ ಲೇಬರ್ ಇನ್ಸ್‌ಟಿಟ್ಯೂಟ್‌ನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

1. ಈ ಇನ್ಸ್‌ಟಿಟ್ಯೂಟ್‌ನ್ನು ರಾಷ್ಟ್ರೀಯ ಕಾನೂನು ಶಾಲೆಯ ಆವರಣದಲ್ಲಿ ನಡೆಸುವುದು.
2. 2008–09ನೇ ಸಾಲಿನಲ್ಲಿ ನೀಡಲಾದ ಲೆಕ್ಕಶೀರ್ಷಿಕೆ 2230–01–277–0–01 ಯೋಜನೆಯಲ್ಲಿ ಒದಗಿಸಲಾದ 65.68 ಲಕ್ಷ ರೂ.ಗಳ ಅನುದಾನದಲ್ಲಿ ವೆಚ್ಚವನ್ನು ಭರಿಸತಕ್ಕದ್ದು.
3. ಯಾವುದೇ ಸಿಬ್ಬಂದಿಯಾಗಲೀ ಅಥವಾ ಕಟ್ಟಡವನ್ನು ಒದಗಿಸಲಾಗುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 601 ವೆಚ್ಚ–9/08, ದಿನಾಂಕ 30–8–2008ರ ಸಹಮತಿಯೊಂದಿಗೆ ಹಾಗೂ ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಪಿಡಿ 90 ಎಂ & ಇ 2008, ದಿನಾಂಕ 9–9–2008ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1331

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮಕ್ಕೆ ಮಂಜೂರಾದ ಹುದ್ದೆಗಳನ್ನು ವಿಂಗಡಿಸಿ, ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮಕ್ಕೆ ವರ್ಗಾಯಿಸುವ ಬಗ್ಗೆ – ಆದೇಶ.

**ಓದಲಾಗಿದೆ:**
1. ಸಕಾರಿ ಆದೇಶ ಸಂಖ್ಯೆ: ಸಕಇ 65 ಎಸ್‌ಡಿಸಿ 04, ದಿನಾಂಕ 27–5–06.
2. ದಿನಾಂಕ 1–4–08ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.
3. ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ: ಡಾ: ಬಿಆರ್‌ಅಂಅನಿ: ಪ್ರ.ವ್ಯ(ಸಿ–ಅ):ಹು:ವ: 08–09, 9129, ದಿನಾಂಕ 27–8–08.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲು ಆದೇಶ ಹೊರಡಿಸಲಾಗಿದೆ. ದಿನಾಂಕ 26–7–06ರಲ್ಲಿ ನಿಗಮವನ್ನು ಭಾರತೀಯ ಕಂಪನಿಗಳ ಅಧಿನಿಯಮದಡಿ ನೋಂದಾಯಿಸಲಾಗಿದೆ. ದಿನಾಂಕ 22–2–07ರಿಂದ ಸದರಿ ನಿಗಮವು ತನ್ನ ಚಟುವಟಿಕೆಗಳನ್ನು ಪ್ರಾರಂಭ ಮಾಡಿದೆ. ದಿನಾಂಕ 17–11–06ರಂದು ನಡೆದ ನಿಗಮದ ನಿರ್ದೇಶಕರುಗಳ ಮಂಡಳಿ ಸಭೆಯಲ್ಲಿ ಒಟ್ಟು 22 ಹುದ್ದೆಗಳನ್ನು ಸೃಜಿಸಲು ತೀರ್ಮಾನಿಸಿ, ಸರ್ಕಾರಕ್ಕೆ ಪ್ರಸ್ತಾವನೆ ಕಳುಹಸಲಾಗಿತ್ತು. ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಆರ್ಥಿಕ ಇಲಾಖೆ ದಿನಾಂಕ 3–8–06ರ ಟಿಪ್ಪಣಿಯಲ್ಲಿ ಸಿಬ್ಬಂದಿಯನ್ನೊಳಗೊಂಡಂತೆ ಷೇರು ಬಂಡವಾಳ, ಆಸ್ತಿ ಮತ್ತು ಹೊಣೆಗಾರಿಕೆಯನ್ನು ವಿಂಗಡಿಸಿ, ಪರಿಶಿಷ್ಟ ವರ್ಗಗಳಿಗೆ ಸಂಬಂಧಿಸಿದಂತೆ ಹೊಸ ನಿಗಮಕ್ಕೆ ವರ್ಗಾಯಿಸಲು ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಮೇಲೆ ಓದಲಾದ (2)ರ ನಡವಳಿಯಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮಕ್ಕೆ ಮಂಜೂರಾದ ಹುದ್ದೆಗಳನ್ನು 2:1ರ ಪ್ರಮಾಣದಲ್ಲಿ ವಿಂಗಡಿಸಿಕೊಂಡು ಸಾಧ್ಯವಿದ್ದಲ್ಲಿ ಸಿಬ್ಬಂದಿ ಸಮೇತ ಹುದ್ದೆಗಳನ್ನು ವರ್ಗಾಯಿಸಲು, ಹೀಗೆ ಸಾಧ್ಯವಿಲ್ಲದಿದ್ದಲ್ಲಿ ಖಾಲಿ ಹುದ್ದೆಗಳನ್ನು ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮಕ್ಕೆ ವರ್ಗಾಯಿಸಲು ನಿರ್ಧರಿಸಲಾಗಿದೆ. ಈ ನಿರ್ಣಯದ ಹಿನ್ನೆಲೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಹುದ್ದೆಗಳನ್ನು ವಿಂಗಡಿಸಿ ಒಟ್ಟು 171 ಖಾಲಿ ಹುದ್ದೆಗಳನ್ನು ಹಾಗೂ 13 ಸಿಬ್ಬಂದಿ ವರ್ಗದವನ್ನು ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮಕ್ಕೆ ವರ್ಗಾಯಿಸಲು ಸರ್ಕಾರದ ಅನುಮೋದನೆಯನ್ನು ಕೋರಿದ್ದಾರೆ. ಅಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 53 ಎಸ್‌ಡಿಸಿ 07, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2008.**

ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮಕ್ಕೆ ಮಂಜೂರಾದ 543 ಹುದ್ದೆಗಳನ್ನು ಈ ಕೆಳಕಂಡಂತೆ ವಿಂಗಡಿಸಿ ಒಟ್ಟು 171 ಹುದ್ದೆಗಳನ್ನು ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ಬೆಂಗಳೂರು ಇದಕ್ಕೆ ವರ್ಗಾಯಿಸಲು ಸರ್ಕಾರವು ಅನುಮೋದನೆ ನೀಡಿದೆ.

| ಕ್ರ. ಸಂ. | ಹುದ್ದೆಗಳ ವಿವರ | ಮಂಜೂರಾದ ಹುದ್ದೆಗಳ ಸಂಖ್ಯೆ | ಹುದ್ದೆಗಳ ವಿಂಗಡಣೆ | |
|---|---|---|---|---|
| | | | ಡಾ:ಬಿ.ಆರ್.ಅಂ.ಅ.ನಿ. | ಕ.ಪ.ಪಂ.ಅ.ನಿ. |
| | **ಗ್ರೂಪ್–ಎ** | | | |
| 1 | ವ್ಯವಸ್ಥಾಪಕ ನಿರ್ದೇಶಕರು | 01 | 01 | – |
| 2 | ಜನರಲ್ ಮ್ಯಾನೇಜರ್ | 04 | 04 | – |
| 3 | ಡೆಪ್ಯೂಟಿ ಜನರಲ್ ಮ್ಯಾನೇಜರ್ | 02 | 02 | – |
| 4 | ಕಂಪನಿ ಸೆಕ್ರೆಟರಿ | 01 | 01 | – |

| ಕ್ರ. ಸಂ. | ಹುದ್ದೆಗಳ ವಿವರ | ಮಂಜೂರಾದ ಹುದ್ದೆಗಳ ಸಂಖ್ಯೆ | ಹುದ್ದೆಗಳ ವಿಂಗಡಣೆ | |
|---|---|---|---|---|
| | | | ಡಾ:ಬಿ.ಆರ್.ಅಂ.ಅ.ನಿ. | ಕ.ಪ.ಪಂ.ಅ.ನಿ. |
| 5 | ಕಾರ್ಯಪಾಲಕ ಅಭಿಯಂತರರು | 01 | 01 | – |
| 6 | ಸೀನಿಯರ್ ಕಂಪ್ಯೂಟರ್ ಪ್ರೋಗ್ರಾಮರ್ | 01 | 01 | – |
| 7 | ಜಿಲ್ಲಾ ವ್ಯವಸ್ಥಾಪಕರು | 29 | 20 | 9 |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರು | 02 | 01 | 01 |
| | **ಒಟ್ಟು** | **41** | **31** | **10** |
| | **ಗ್ರೂಪ್–ಬಿ** | | | |
| 1 | ಡ್ರಿಲ್ಲಿಂಗ್ ಎಂಜಿನಿಯರ್ | 01 | 01 | – |
| 2 | ವಸೂಲಾತಿ ಅಧಿಕಾರಿ | 27 | 18 | 09 |
| | **ಒಟ್ಟು** | **28** | **19** | **09** |
| | **ಗ್ರೂಪ್–ಸಿ** | | | |
| 1 | ಸಹಾಯಕ ಎಂಜಿನಿಯರ್ | 04 | 03 | 01 |
| 2 | ಆಂತರಿಕ ಲೆಕ್ಕ ಪರಿಶೋಧಕರು | 02 | 01 | 01 |
| 3 | ಕಚೇರಿ ಅಧೀಕ್ಷಕರು | 39 | 29 | 10 |
| 4 | ತಾಲ್ಲೂಕು ಅಭಿವೃದ್ಧಿ ಅಧಿಕಾರಿಗಳು | 175 | 117 | 58 |
| 5 | ಲೆಕ್ಕ ಸಹಾಯಕರು/ಪ್ರ.ದ.ಸ. | 73 | 53 | 20 |
| 6 | ಶೀಘ್ರಲಿಪಿಗಾರರು | 05 | 03 | 02 |
| 7 | ಕಿರಿಯ ಸಹಾಯಕರು | 54 | 36 | 18 |
| 8 | ಕ್ಲರ್ಕ್ ಕಂ ಟೈಪಿಸ್ಟ್ | 20 | 13 | 07 |
| 9 | ಬೆರಳಚ್ಚುಗಾರರು | 23 | 15 | 08 |
| | **ಒಟ್ಟು** | **395** | **270** | **125** |
| | **ಗ್ರೂಪ್–ಡಿ** | | | |
| 1 | ವಾಹನ ಚಾಲಕರು | 32 | 21 | 11 |
| 2 | ದಲಾಯಿತರು | 47 | 31 | 16 |
| | **ಒಟ್ಟು** | **79** | **52** | **27** |
| | **ಒಟ್ಟು (ಎ+ಬಿ+ಸಿ+ಡಿ)** | **543** | **372** | **171** |

ಹಾಗೆಯೇ ಪ್ರಸ್ತಾಪಿಸಿದಂತೆ ಈ ಕೆಳಕಂಡ ಹುದ್ದೆಗಳನ್ನು ಸದರಿ ಹುದ್ದೆಗಳಲ್ಲಿ ಹಾಲಿ ಕೆಲಸ ಮಾಡುತ್ತಿರುವ ಸಿಬ್ಬಂದಿಯೊಂದಿಗೆ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ಬೆಂಗಳೂರು ಇಲ್ಲಿಗೆ ವರ್ಗಾಯಿಸಿ ನೇಮಿಸಲು ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರಿಗೆ ಅನುಮೋದನೆ ನೀಡಲಾಗಿದೆ.

| ಕ್ರ.ಸಂ. | ಹುದ್ದೆ | ಡಾ: ಬಿ.ಆರ್.ಅಂ.ಅ.ನಿ. ನೀಡಬಹುದಾದ ಸಿಬ್ಬಂದಿ |
|---|---|---|
| 1 | ಉಪ ವ್ಯವಸ್ಥಾಪಕರು | 02 |
| 2 | ವಸೂಲಾತಿ ಅಧಿಕಾರಿ | 02 |
| 3 | ಕಚೇರಿ ಅಧೀಕ್ಷಕರು | 01 |
| 4 | ಪ್ರ.ದ.ಸ. | 02 |
| 5 | ಶೀಘ್ರಲಿಪಿಗಾರರು | 01 |
| 6 | ಕಿರಿಯ ಸಹಾಯಕರು | 02 |

| ಕ್ರ.ಸಂ. | ಹುದ್ದೆ | ಡಾ: ಬಿ.ಆರ್.ಅಂ.ಅ.ನಿ. ನೀಡಬಹುದಾದ ಸಿಬ್ಬಂದಿ |
|---|---|---|
| 7 | ವಾಹನ ಚಾಲಕರು | 01 |
| 8 | ದಲಾಯಿತ | 02 |
| | **ಒಟ್ಟು** | **13** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1332

**ಕೆ. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಮಾಜ ಕಲ್ಯಾಣ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು, ತತ್ಕೋಳ ಮೀಸಲು ಅರಣ್ಯ ಒತ್ತುವರಿ ತೆರವು ಮತ್ತು ಸಂತ್ರಸ್ತ ಕುಟುಂಬಗಳಿಗೆ ಪುನರ್ವಸತಿ ಕುರಿತು.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ರವರ ಅ.ಸ. ಪತ್ರ ಸಂಖ್ಯೆ: ಎಂ4/ಎಲ್ಎನ್‌ಡಿ/ಸಿಆರ್/196/ 2004–05, ದಿನಾಂಕ 22–2–2007.
2. ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ರವರ ಅ.ಸ. ಪತ್ರ ಸಂ: ಎಂ4/ಎಲ್ಎನ್‌ಡಿ/ಸಿಆರ್/567/ 97–98, ದಿನಾಂಕ 10–7–2007.
3. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 337 ಬಿಆರ್ಎಸ್ 2008, ದಿನಾಂಕ 26–8–2008.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ರವರು ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ದಿನಾಂಕ 22–2–2007 ಮತ್ತು ದಿ: 10–7–2007ರ ಅರೆ ಸರ್ಕಾರಿ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲೆಯ ವಿವಿಧ ಅರಣ್ಯ ಪ್ರದೇಶಗಳ ಒತ್ತುವರಿ ತೆರವು ಮತ್ತು ಸಂತ್ರಸ್ತ ಕುಟುಂಬಗಳ ಪುನರ್ವಸತಿ ವಿವಾದ ಇತ್ಯರ್ಥದ ಬಗ್ಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ (ಹಿಂದಿನ) ರವರ ನೇತೃತ್ವದಲ್ಲಿ ರಚಿತವಾಗಿರುವ ಸರ್ಕಾರದ ಉನ್ನತ ಮಟ್ಟದ ಅಧಿಕಾರಿಗಳ ವಿಶೇಷ ತಂಡವು ಜಿಲ್ಲೆಗೆ ಬೇಟಿ ನೀಡಿ, ಸಮಸ್ಯೆಗಳ ಅಧ್ಯಯನದ ನಂತರ ಸರ್ಕಾರಕ್ಕೆ ಸಲ್ಲಿಸಿರುವ ವರದಿಯ ಪ್ರಕಾರ ತತ್ಕೋಳ, ಸಾರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯ ಒತ್ತುವರಿ ತೆರವು ಸಂತ್ರಸ್ತರ ಪುನರ್ವಸತಿಗಾಗಿ ಹಲವು ಸಲವತ್ತುಗಳು ಮತ್ತು ಹೆಚ್ಚುವರಿ ಆರ್ಥಿಕ ಹಂಚಿಕೆ ಮಂಜೂರಾತಿ ನೀಡಲು ಶಿಫಾರಸ್ಸು ಮಾಡಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ತತ್ಕೋಳ ಮೀಸಲು ಅರಣ್ಯದಿಂದ ತೆರವುಗೊಳಿಸಿದ ಸಂತ್ರಸ್ಥರಿಗೆ ವಿವಿಧ ಸವಲತ್ತುಗಳನ್ನು ಒದಗಿಸಲು ಒಟ್ಟು 10 ಐಟಂಗಳಿಗೆ ತಗಲುವ ಆರ್ಥಿಕ ಮೊತ್ತ ರೂ. 211.97 ಲಕ್ಷಗಳನ್ನು ಬಿಡುಗಡೆ ಮಾಡಿ ಸರ್ಕಾರದ ಆದೇಶ ನೀಡುವಂತೆ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

2) ತತ್ಕೋಳ ನಿರಾಶ್ರಿತರ ಹೋರಾಟ ಸಮಿತಿ ಮುಖಂಡರು ಮೂಡಿಗೆರೆ ತಾಲ್ಲೂಕು ಇವರು ಕರ್ನಾಟಕ ರಾಜ್ಯ ಮಾನವ ಹಕ್ಕು ಆಯೋಗಕ್ಕೆ ದೂರನ್ನು ಸಲ್ಲಿಸಿ ಸಾಕಷ್ಟು ಕಾಲ ಕಳೆದಿದ್ದರೂ ಸಹ ಪುನರ್ ವಸತಿ ಕಲ್ಪಿಸಲು ಇದುವರೆವಿಗೂ ಸರ್ಕಾರವು ಹಣ ಬಿಡುಗಡೆ ಮಾಡಿಲ್ಲವೆಂದು ಹಾಗೂ ತಮಗೆ ಕಾಫಿ ಬೆಳೆಗಾಗಿ ಸಾಲವಾಗಿ ಮಂಜೂರು ಮಾಡಲಾದ ಮೊತ್ತವನ್ನು ಸಾರಗೋಡು ಮಸ್ಕಲಿ ಅರಣ್ಯದಿಂದ ತೆರವುಗೊಳಿಸಿದ ಸಂತ್ರಸ್ತರಿಗೆ ಮಂಜೂರು ಮಾಡಿರುವಂತೆ ತಮಗೂ ಸಹ ಅನುದಾನವಾಗಿ ನೀಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮಾನ್ಯ ರಾಜ್ಯ ಮಾನವ ಹಕ್ಕುಗಳ ಆಯೋಗ ಬೆಂಗಳೂರು ರವರು ಮೊಕದ್ದಮೆ ಸಂ: 310/07, 522/08 ಮತ್ತು 919/08ರ ಬಗ್ಗೆ ದಿ: 17–5–2008ರಂದು ನೀಡಿರುವ ಆದೇಶದಲ್ಲಿ ಒಂದು ಗ್ರಾಮಕ್ಕೆ ನೀಡುವ ಪ್ಯಾಕೇಜ್ ಮತ್ತೊಂದು ಗ್ರಾಮದ ಸಂತ್ರಸ್ಥರಿಗೆ ನೀಡುವ ಪ್ಯಾಕೇಜ್‌ಗಿಂತ ಭಿನ್ನವಾಗಿದ್ದರೆ ಸ್ವಾಭಾವಿಕವಾಗಿ ಇದು ಮೇಲ್ನೋಟಕ್ಕೆ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ ಎನ್ನುವ ಭಾವನೆ ಬರುತ್ತದೆ ಎಂದು ತಿಳಿಸಿ, ತತ್ಕೋಳ ಅರಣ್ಯ ಸಂತ್ರಸ್ಥರಿಗೆ ಜಮೀನು ಅಭಿವೃದ್ಧಿಪಡಿಸಲು ಸಿಗಬೇಕಾದ ಪರಿಹಾರವನ್ನು ಅನುದಾನವೇ ಅಥವಾ ಸಾಲವೇ ಎಂಬ ಬಗ್ಗೆ ಸಮಂಜಸ ತೀರ್ಮಾನ ತೆಗೆದುಕೊಳ್ಳುವಂತೆ ಅಭಿಪ್ರಾಯ ವ್ಯಕ್ತಪಡಿಸಿರುತ್ತದೆ. ಕಾರಣ ಸಾರಗೋಡು ಹಾಗೂ ಮಸ್ಕಲಿ ಅರಣ್ಯದಿಂದ ತೆರವುಗೊಳಿಸಿದ ಸಂತ್ರಸ್ಥರಿಗೆ ಮಂಜೂರು ಮಾಡಿದ ಪ್ಯಾಕೇಜಿನಂತೆ ತತ್ಕೋಳ ಸಂತ್ರಸ್ಥರಿಗೆ ಪರಿಹಾರ ನೀಡುವುದು ಸೂಕ್ತವೆಂಬ ತೀರ್ಮಾನಕ್ಕೆ ಸರ್ಕಾರವು ಬಂದಿರುತ್ತದೆ.

3) ಮೇಲೆ ಕ್ರಮ ಸಂಖ್ಯೆ.3ರಲ್ಲಿ ಓದಲಾದ ದಿನಾಂಕ 26-8-2008ರ ಆದೇಶದಲ್ಲಿ ಆರ್ಥಿಕ ಇಲಾಖೆಯು ತತ್ಕೋಳ ಮೀಸಲು ಅರಣ್ಯದಿಂದ ತೆರವುಗೊಳಿಸಿದ ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸಲು 211.17 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಲೆಕ್ಕಶೀರ್ಷಿಕೆ 2075-00-800-4-03-132 Capital Expenses (voted) (NP) ರಲ್ಲಿ ಮಂಜೂರು ಮಾಡಿದೆ.

4) ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 39 ಎಲ್‌ಜಿಯು 2007, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಚಿಕ್ಕಮಗಳೂರು ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುವಂತೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕು ತತ್ಕೋಳ ಮೀಸಲು ಅರಣ್ಯದಿಂದ ತೆರವುಗೊಳಿಸಿದ ಸಂತ್ರಸ್ಥರಿಗೆ ಸಾರಗೋಡು ಹಾಗೂ ಮಸ್ಕಲಿ ಸಂತ್ರಸ್ಥರಿಗೆ ನೀಡಿರುವ ರೀತಿಯಲ್ಲಿಯೇ ಪುನರ್‌ವಸತಿ ಕಲ್ಪಿಸುವ ಕುರಿತ ಪ್ಯಾಕೇಜನ್ನು ಈ ಕೆಳಗೆ ನಮೂದಿಸಿದ ಒಟ್ಟು 10 ಐಟಂಗಳಿಗೆ ರೂ. 211.17 ಲಕ್ಷಗಳ (ಎರಡುನೂರ ಹನ್ನೊಂದು ಲಕ್ಷ ಹದಿನೇಳು ಸಾವಿರ ರೂ.ಗಳು ಮಾತ್ರ) ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಮಂಜೂರಾತಿಯನ್ನು ನೀಡಲಾಗಿದೆ:

| ಕ್ರ.ಸಂ. | ಸವಲತ್ತಿನ ವಿವರ | ಒಟ್ಟು ವೆಚ್ಚ (ರೂ.ಲಕ್ಷಗಳಲ್ಲಿ) |
|---|---|---|
| 1 | ತತ್ಕೋಳ ಮೀಸಲು ಅರಣ್ಯ ಸಂತ್ರಸ್ತರ ಪೈಕಿ, ಮಂಜೂರು ಮಾಡಿರುವ ಜಮೀನು ವಾಸಸ್ಥಳದಿಂದ ದೂರದಲ್ಲಿರುವವರಿಗೆ ಮಂಜೂರಿ ಜಮೀನಿನಲ್ಲಿ ಮನೆ ನಿರ್ಮಿಸಿಕೊಳ್ಳಲು ಸಾರಗೋಡು ಪ್ಯಾಕೇಜ್‌ನಲ್ಲಿ ಅವಕಾಶ ಕಲ್ಪಿಸಲಾಗಿರುವ ಮಾದರಿಯಲ್ಲಿ ಪ್ರತಿ ಕುಟುಂಬಕ್ಕೆ ತಲಾ ರೂ. 50,000/-ಗಳಂತೆ ಒಟ್ಟು ವೆಚ್ಚ. | 17.50 |
| 2 | ಸರ್ಕಾರದಿಂದ ಮನೆಗಳನ್ನು ನಿರ್ಮಿಸಿ ಹಂಚಿಕೆ ಮಾಡಿದಂತೆ ಪಡೆದುಕೊಂಡಿರುವವರಿಗೆ ತಲಾ 10,000/- ರೂ.ಗಳ ಮೂಲಭೂತ ಸೌಕರ್ಯದ ವೆಚ್ಚ ಕಳೆದು ಈಗಾಗಲೇ ನೀಡಿರುವ ರೂ. 20,000/-ಗಳ ಜೊತೆಗೆ ತಲಾ 20,000/- ರೂ.ಗಳನ್ನು ಮನೆಯ ವಿಸ್ತರಣೆ ಹಾಗೂ ರಿಪೇರಿಗಾಗಿ ನೀಡಬೇಕಾದ ಒಟ್ಟು ಮೊಬಲಗು. | 6.40 |
| 3 | ಸಾರಗೋಡು ಪ್ಯಾಕೇಜ್‌ನಲ್ಲಿ ನೀಡಿರುವ ಪ್ರಕಾರ ಕುಟುಂಬದ ಪ್ರಾಪ್ತ ವಯಸ್ಸಿನ ಗಂಡು ಮಕ್ಕಳು ಮತ್ತು ಅಶಕ್ತ ಅವಿವಾಹಿತ ವಯಸ್ಕ ಹೆಣ್ಣುಮಕ್ಕಳಿಗೆ ತಲಾ ರೂ. 50,000/-ಗಳ ಅನುದಾನ | 10.00 |
| 4 | ಆಶ್ರಯ ಯೋಜನೆಯಡಿ ವಾಸದ ಮನೆ ನಿರ್ಮಾಣಕ್ಕಾಗಿ 37 ಜನರಿಗೆ ಮಂಜೂರು ಮಾಡಿರುವ ಸಾಲವನ್ನು ಅನುದಾನವಾಗಿ ಪರಿವರ್ತನೆ. | 3.00 |
| 5 | ತತ್ಕೋಳ ಪುನರ್ವಸತಿ ನಿವಾಸಿಗಳಿಗೆ ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲು ಗ್ರಾಮ | 2.00 |
| 6 | ಕುಟೀರಜ್ಯೋತಿ ಯೋಜನೆಯಡಿ ತತ್ಕೋಳ ನಿರಾಶ್ರಿತರಿಗೆ ಹಂಚಿಕೆ ಮಾಡಿರುವ ಮನೆಗಳಿಗೆ ವಿದ್ಯುದ್ಧೀಕರಣ ಮಾಡಲು ಮೆಸ್ಕಾಂಗೆ ಪಾವತಿ ಮಾಡಲು | 1.00 |
| 7 | ಸಂತ್ರಸ್ಥರಿಗೆ ಮಂಜೂರು ಮಾಡಿರುವ 182.00 ಎಕರೆ ಜಮೀನಿನಲ್ಲಿರುವ ಮರಗಳ ಬೊಡ್ಡೆಗಳನ್ನು ತೆಗೆದು ಜಮೀನನ್ನು ಸಾಗುವಳಿ ಯೋಗ್ಯಗೊಳಿಸುವ ವೆಚ್ಚ. | 30.00 |
| 8 | ತತ್ಕೋಳ ನಿರಾಶ್ರಿತರಿಗೆ ಮಂಜೂರು ಮಾಡಿರುವ ಜಮೀನಿನಲ್ಲಿ ಕಾಫಿ ಬೆಳೆ ಅಭಿವೃದ್ಧಿಪಡಿಸಲು ನೀಡುವ ಅನುದಾನದ ವೆಚ್ಚ. | 136.50 |
| 9 | ಶ್ರೀಮತಿ ಕಮಲಮ್ಮ ಎಂಬುವರಿಗೆ ನಿಯಮಬದ್ಧವಾಗಿ ಮಂಜೂರು ಮಾಡಲಾಗಿದ್ದ 4-30 ಎಕರೆ ಜಮೀನು ವಾಸದ ಮನೆ, ಪಂಪೌಸ್ ಮುಂತಾದವುಗಳನ್ನು ತೆರವು ಮಾಡಿರುವುದಕ್ಕೆ ಪರಿಹಾರ | 4.65 |
| 10 | ಶ್ರೀ ಶಿವಣ್ಣ ಎಂಬುವರನ್ನು ಕಾನೂನಿಗೆ ವಿರುದ್ಧವಾಗಿ ತೆರವು ಮಾಡಿರುವುದಕ್ಕೆ ಪರಿಹಾರ | 0.12 |
| | **ಒಟ್ಟು** | **211.17** |

ಈ ವೆಚ್ಚವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ.3ರಲ್ಲಿ ನಮೂದಿಸಿದ ಆದೇಶ ಸಂಖ್ಯೆ: ಎಫ್‌ಡಿ 337 ಬಿಆರ್‌ಎಸ್ 2008, ದಿನಾಂಕ 26-8-2008ರನ್ವಯ ಲೆಕ್ಕ ಶೀರ್ಷಿಕೆ 2075-00-800-4-03-132 Capital Expenses (voted) (NP) ಅಡಿಯಲ್ಲಿ ಮಂಜೂರು ಮಾಡಲಾಗಿರುವ ರೂ. 211.17 ಲಕ್ಷಗಳ (ಎರಡುನೂರ ಹನ್ನೊಂದು ಲಕ್ಷ ಹದಿನೇಳು ಸಾವಿರ ರೂ.ಗಳು ಮಾತ್ರ) ಹೆಚ್ಚುವರಿ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 895 ವೆಚ್ಚ–7 2008, ದಿನಾಂಕ 20–8–2008ರ ಸಹಮತಿ ಮೇರೆಗೆ ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ 3ರಲ್ಲಿ ನಮೂದಿಸಿದ ಆದೇಶ ಸಂಖ್ಯೆ: ಎಫ್‌ಡಿ 337 ಬಿಆರ್‌ಎಸ್ 2008, ದಿನಾಂಕ 26–8–2008ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1333

**ಇ. ಈಶ್ವರನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.)

## ಕಾರ್ಮಿಕ ಸಚಿವಾಲಯ

**ವಿಷಯ :** 2008–09ನೇ ಸಾಲಿನಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ರವರ ಪತ್ರ ಸಂ. ಉತನಿ/ತರಬೇತಿ/ಯೋ–2/ ವಿವ–04/2008–09, ದಿನಾಂಕ 2–8–2008 ಮತ್ತು 4–8–2008.

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಯವರು 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಈ ಸಾಲಿನಲ್ಲಿ ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಲು ಉದೇಶಿಸಿರುವುದಾಗಿ ತಿಳಿಸಿರುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಬೆಂಗಳೂರು ಇವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಹಿಂದುಳಿದ ಪ್ರದೇಶಗಳಲ್ಲಿ ಹಾಗೂ ಹೆಚ್ಚಿಗೆ ಬೇಡಿಕೆ ಇರುವ ಸ್ಥಳಗಳಲ್ಲಿ ಮತ್ತು ಕೌಶಲ್ಯ ಅಭಿವೃದ್ಧಿಯನ್ನು ಪರಿಗಣನೆಗೆ ತೆಗೆದುಕೊಂಡು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನ ಹತ್ತು ಸ್ಥಳಗಳಲ್ಲಿ ಸರ್ಕಾರವು 2008–09ನೇ ಸಾಲಿನಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 287 ಇಟಿಐ 2008(ಭಾಗ) ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

2008–09ನೇ ಸಾಲಿನಲ್ಲಿ ರಾಜ್ಯದ ಈ ಕೆಳಗಿನ 10 ಸ್ಥಳಗಳಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

| | |
|---|---|
| 1 | ಗುಡಿಬಂಡೆ, ಚಿಕ್ಕಬಳ್ಳಾಪುರ ಜಿಲ್ಲೆ |
| 2 | ಕೊರಟಗೆರೆ, ತುಮಕೂರು ಜಿಲ್ಲೆ |
| 3 | ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ |
| 4 | ಅಂಕೋಲ, ಉತ್ತರ ಕನ್ನಡ ಜಿಲ್ಲೆ |
| 5 | ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ |
| 6 | ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 7 | ಸೊರಬ, ಶಿವಮೊಗ್ಗ ಜಿಲ್ಲೆ |
| 8 | ಶಿರಾಳಕೊಪ್ಪ, ಶಿವಮೊಗ್ಗ ಜಿಲ್ಲೆ |
| 9 | ಶಿಗ್ಗಾಂವ್, ಹಾವೇರಿ ಜಿಲ್ಲೆ |
| 10 | ಹುಬ್ಬಳ್ಳಿ–ಧಾರವಾಡ, ಧಾರವಾಡ ಜಿಲ್ಲೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 610 ವೆಚ್ಚ–9/2008, RF 28662 ದಿನಾಂಕ 5–9–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1315

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಕಿಶನ್‌ರಾವ್ ಜಹಗೀರ್‌ದಾರ್, ಹಿಂದಿನ ತಹಶೀಲ್ದಾರ್, ಯಾದಗೀರ್ ತಾಲ್ಲೂಕು (ಪ್ರಸ್ತುತ ನಿವೃತ್ತರು) ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ಆರ್‌ಡಿ 64 ಎಡಿಇ 2001, ದಿನಾಂಕ 20–1–2003.

2. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ 25–1–2005.

**ಪ್ರಸ್ತಾವನೆ :**

ಶ್ರೀ ಕಿಶನ್‌ರಾವ್ ಜಹಗೀರ್‌ದಾರ್, ನಿವೃತ್ತ ತಹಶೀಲ್ದಾರ್ ಇವರು ಯಾದಗೀರ್ ತಾಲ್ಲೂಕಿನ ತಹಶಿಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ಅದೆಪ್ಪ, ಮುಖ್ಯ ಗುರುಗಳು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಗೋಡಗಿ ತಾಂಡಾ, ಯಾದಗೀರ್ ತಾಲ್ಲೂಕು ಇವರು ತಮ್ಮ ಇಬ್ಬರು ಮಕ್ಕಳಾದ ಶ್ರೀ ರವಿಕುಮಾರ ಮತ್ತು ಶ್ರೀ ನೀಲಕಂಠ, ಇವರುಗಳಿಗೆ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ನೀಡಲು ದಿನಾಂಕ 15–2–2000 ರಂದು ತಹಶೀಲ್ದಾರರಿಗೆ ಅರ್ಜಿ ಸಲ್ಲಿಸಿದ್ದು, ಇವರ ಪೈಕಿ ತಹಶೀಲ್ದಾರರು ಒಬ್ಬ ಮಗನಿಗೆ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ನೀಡಿ ಇನ್ನೊಬ್ಬನ ವಿಷಯದಲ್ಲಿ ಪಾಲಕರ ಆದಾಯ ನಿಗದಿಪಡಿಸಿದ ಮಿತಿ ಮೀರುತ್ತದೆಂದು ಕಾರಣ ತೋರಿಸಿ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಕೊಡುವಲ್ಲಿ ವಿನಾಕಾರಣ ವಿಳಂಬ ಮಾಡಿದ ಕಾರಣ, ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ 20–1–2003ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿತ್ತು.

ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ಜರುಗಿಸಿದ ವಿಚಾರಣಾಧಿಕಾರಿಗಳು ವಿಚಾರಣಾದ ವರದಿಯನ್ನು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ 21–5–2005ರ ಪತ್ರದೊಂದಿಗೆ ಸರ್ಕಾರಕ್ಕೆ ಕಳುಹಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಶ್ರೀ ಕಿಶನ್‌ರಾವ್ ಜಹಗೀರ್‌ದಾರ್, ಇವರ ವಿರುದ್ಧದ ಆರೋಪವು ಸಾಕ್ಷಿದಾರರುಗಳಿಂದ ಸಾಬೀತಾಗಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಿಸಿದಂತೆ ದಾಖಲೆಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸದರಿ ಅಧಿಕಾರಿಯವರ ವಿರುದ್ಧದ ಆಪಾದನೆಗಳು ಸಾಬೀತಾಗದಿರುವುದರಿಂದ ಅವರನ್ನು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪದಿಂದ ಮುಕ್ತಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಡಿಇ 2001, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಕಿಶನ್‌ರಾವ್ ಜಹಗೀರ್‌ದಾರ್, ಹಿಂದಿನ ತಹಶೀಲ್ದಾರ್, ಯಾದಗೀರ್ (ಪ್ರಸ್ತುತ ನಿವೃತ್ತರು) ಗುಲ್ಬರ್ಗಾ ಜಿಲ್ಲೆ ಇವರ ಆರೋಪಗಳು ಸಾಬೀತಾಗಿಲ್ಲದ ಕಾರಣ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂ: ಆರ್‌ಡಿ 64 ಎಡಿಇ 2001, ದಿನಾಂಕ 20–1–2003ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1334

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ವಿಜಯೇಂದ್ರ ಎಸ್. ರಾಯದುರ್ಗ, ನೇತ್ರ ಪರೀಕ್ಷಕರು, ಇವರನ್ನು ಇಲಾಖೆಯಲ್ಲಿ ವಿಲೀನಗೊಳಿಸಲು ಕೋರಿರುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆ ಇವರ ಪತ್ರ ಸಂಖ್ಯೆ: ಅಭಿವೃದ್ಧಿ/185/2007–08, ದಿ: 31–7–2008.

**ಪ್ರಸ್ತಾವನೆ :**

ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆ, ಇವರು ಮೇಲೆ ಓದಲಾದ ದಿ: 31–7–2008ರ ತಮ್ಮ ಪತ್ರದಲ್ಲಿ ಶ್ರೀ ವಿಜಯೇಂದ್ರ ಎಸ್. ರಾಯದುರ್ಗ, ನೇತ್ರ ಸಹಾಯಕರು, ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿಯೋಜನೆ ಮೇರೆಗೆ ಕಾರಾವಿ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ (ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು) ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆಂದು ಇವರು ಕಾರಾವಿ ಯೋಜನೆ (ವೈ) ಸೇವೆಗಳು ಇಲಾಖೆ ಸೇವೆಯಲ್ಲಿ ವಿಲೀನಗೊಳ್ಳಲು ಇಚ್ಛಿಸಿ ಇಚ್ಛಾ ಪತ್ರವನ್ನು ಸಲ್ಲಿಸಿರುತ್ತಾರೆಂದು, ಸದರಿಯವರ ಸೇವೆಯನ್ನು ಕಾರಾವಿ ಇಲಾಖೆಯ ಸೇವೆಯಲ್ಲಿ

ವಿಲೀನಗೊಳಿಸುವ ಬಗ್ಗೆ ಆ.ಕು.ಕ. ಇಲಾಖೆ ಅಭಿಪ್ರಾಯವನ್ನು ಕೋರಲಾಗಿದ್ದು ಇವರ ಸೇವೆಯನ್ನು ಆ.ಕು.ಕ. ಇಲಾಖೆಯ ಸೇವೆಯಿಂದ ಕಾರಾವಿ ಇಲಾಖೆಯ ಸೇವೆಗೆ ವಿಲೀನಗೊಳಿಸಲು ಅನುಮತಿಯನ್ನು ನೀಡಿರುತ್ತಾರೆಂದು ತಿಳಿಸಿರುತ್ತಾರೆ.

ಶ್ರೀ ವಿಜಯೇಂದ್ರ ಎಸ್. ರಾಯದುರ್ಗ, ಇವರು ಕಾರಾವಿ ಇಲಾಖೆಯ ಸೇವೆಯಲ್ಲಿ ವಿಲೀನಗೊಳ್ಳಲು ಇಚ್ಛಿಸಿ, ಸಲ್ಲಿಸಿರುವ ಇಚ್ಛಾ ಪತ್ರದಲ್ಲಿ ಸೇವಾ ಜೇಷ್ಠತೆಯನ್ನು ಇಲಾಖೆಯಲ್ಲಿ ವಿಲೀನಗೊಂಡ ದಿನಾಂಕದಿಂದ ನಿಗಧಿಪಡಿಸಲು ಒಪ್ಪುವುದಾಗಿ ಒಪ್ಪಿಗೆ ನೀಡಿರುವ ಕಾರಣ ಇಲಾಖೆಗೆ ಎರಡು ನೇತ್ರ ಸಹಾಯಕರ ಹುದ್ದೆ ಮಂಜೂರಾಗಿದ್ದು ಒಂದು ಹುದ್ದೆಯಲ್ಲಿ ಇಲಾಖೆಯ ನೌಕರರು ಹಾಗೂ ಇನ್ನೊಂದರಲ್ಲಿ ಶ್ರೀ ವಿಜಯೇಂದ್ರ ಎಸ್. ರಾಯದುರ್ಗ ಇವರು ಕಾರ್ಯನಿರ್ವಹಿಸುತ್ತಿರುವ ಕಾರಣ ಇವರನ್ನು ಕಾರಾವಿ ಇಲಾಖೆಯಲ್ಲಿ ವಿಲೀನಗೊಳಿಸಲು ಆದೇಶವನ್ನು ಹೊರಡಿಸುವಂತೆ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 320 ಎಲ್‌ಎಸ್ಐ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ ನೇಮಕಗೊಂಡು ಪ್ರತಿ ನಿಯೋಜನೆ ಮೇಲೆ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀ ವಿಜಯೇಂದ್ರ ಎಸ್. ರಾಯದುರ್ಗ, ನೇತ್ರ ಸಹಾಯಕರು, (ರಿಫ್ರಾಕ್ಷನಿಸ್ಟ್) ಇವರ ಸೇವೆಯನ್ನು ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಿಕಾತಿ) ನಿಯಮಾವಳಿಗಳು 1977ರ ನಿಯಮ 16(A)(ii)ರನ್ವಯ ವಿಲೀನಗೊಳಿಸಿದೆ. ಈ ಆದೇಶದ ದಿನಾಂಕದಿಂದ ಇವರ ಜೇಷ್ಠತೆಯನ್ನು ನಿಗದಿಪಡಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1316

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಪಲ್ಪವುಡ್ ನಿಗಮದ ನೌಕರರ ಸ್ವಯಂ ನಿವೃತ್ತಿ ಯೋಜನೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶದ ಸಂಖ್ಯೆ: ಡಿಡಿಪಿಇಆರ್ 56 ಎಆರ್‌ಯು 2002, ದಿನಾಂಕ 2–1–2004.
2. ಸರ್ಕಾರದ ಆದೇಶದ ಸಂಖ್ಯೆ: ಎಲ್‌ಡಿ 559 ಐಡಿಜಿ 2004, ದಿನಾಂಕ 23–11–2004.
3. ಸರ್ಕಾರದ ಆದೇಶದ ಸಂಖ್ಯೆ: ಡಿಪಿಇ 34 ಎಆರ್‌ಯು 2006, ದಿನಾಂಕ 19–1–2006.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಲ್ಪ್‌ವುಡ್ ನಿಗಮ ಇವರ ಪತ್ರ ಸಂಖ್ಯೆ: ಕಪನಿ/ಸಿಎಜಿ/ವರದಿ–2004–05/2007–08/2056, ದಿನಾಂಕ 21–2–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 2–1–2004 ಆದೇಶದಲ್ಲಿ ಕೈಗಾರಿಕಾ ವಿವಾದಗಳ ಅಧಿನಿಯಮ 1947ರ ನಿಯಮ 25(O)ರನ್ವಯ ಕರ್ನಾಟಕ ಪಲ್ಪ್‌ವುಡ್ ನಿಗಮವನ್ನು ಕಾರ್ಮಿಕ ಇಲಾಖೆಯಿಂದ ವಿದ್ಯುಕ್ತವಾಗಿ ಅನುಮತಿ ಪಡೆಯುವ ಷರತ್ತಿನೊಂದಿಗೆ ಮುಚ್ಚಲು ಆದೇಶಿಸಲಾಯಿತು ಹಾಗೂ ನಿಗಮದಿಂದ ಸೇವೆ ಸಲ್ಲಿಸುತ್ತಿರುವ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಅಳವಡಿಸಲು ಆದೇಶಿಸಲಾಯಿತು. ಸ್ವಯಂ ನಿವೃತ್ತಿ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳದ ನೌಕರರನ್ನು ನಿಯಮಾನುಸಾರ ವಜಾ ಮಾಡಲು ಸಹ ಸೂಚಿಸಲಾಗಿತ್ತು.

2. ಮೇಲೆ (2)ರಲ್ಲಿ ಓದಲಾದ ದಿನಾಂಕ 23–11–2004ರ ಆದೇಶದಲ್ಲಿ ಕೈಗಾರಿಕಾ ವಿವಾದಗಳ ಕಾಯ್ದೆ, 1947ರ ಸೆಕ್ಷನ್ 25(0) ರಡಿ ಕರ್ನಾಟಕ ಪಲ್ಪ್‌ವುಡ್ ನಿಗಮವನ್ನು ಮುಚ್ಚಲು ಆದೇಶಿಸಲಾಯಿತು.

3. ಮೇಲೆ (3)ರಲ್ಲಿ ಓದಲಾದ ದಿನಾಂಕ 19–1–2006 ಆದೇಶದಲ್ಲಿ ಕರ್ನಾಟಕ ಪಲ್ಪ್‌ವುಡ್ ನಿಗಮದ 170 ಜನ ನೌಕರರಿಗೆ ಸ್ವಯಂ ನಿವೃತ್ತಿ ಪರಿಹಾರ ಧನ ವಿತರಿಸಲು ಸಾಧ್ಯವಾಗುವಂತೆ ರೂ. 2,89,35,520 ಗಳನ್ನು ಬಿಡುಗಡೆ ಮಾಡಲಾಯಿತು.

4. ಕರ್ನಾಟಕ ಪಲ್ಪ್‌ವುಡ್ ನೌಕರರ ಸಂಘವು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 3250–3533/2005ನ್ನು ದಾಖಲು ಮಾಡಿದ್ದು ಮಾನ್ಯ ಉಚ್ಚ ನ್ಯಾಯಾಲಯವು ತನ್ನ ದಿನಾಂಕ 28–1–2005ರ ತೀರ್ಪಿನಲ್ಲಿ ಕರ್ನಾಟಕ ಪಲ್ಪ್‌ವುಡ್ ನಿಗಮವನ್ನು ದಿನಾಂಕ 7–2–2005 ರೊಳಗಾಗಿ ಮುಚ್ಚಿ ಸ್ವಯಂ ನಿವೃತ್ತಿ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳಲು ಇಚ್ಛಿಸುವ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳಲು ಹಾಗೂ ಈ

ಯೋಜನೆಯನ್ನು ಆಯ್ಕೆ ಮಾಡಿಕೊಳ್ಳಲು ಸಹಮತಿ ವ್ಯಕ್ತಪಡಿಸುವ ನೌಕರರು ಮುಚ್ಚುವಿಕೆ ಪರಿಹಾರ ಧನ ಮಂಜೂರಾತಿಗಾಗಿ ಹಾಗೂ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಲ್ಲಿ ವಿಲೀನ ಹೊಂದಲು ಕೋರಿಕೆ ಸಲ್ಲಿಸುವಂತೆ ಆದೇಶಿಸಿತು. ಇದೇ ನಿಗಮದ ಇನ್ನೊಂದು ತಂಡವು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 1651–81ನ್ನು ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಲಯವು ತನ್ನ ತೀರ್ಪಿನಲ್ಲಿ ಅರ್ಜಿದಾರರು ಸ್ವಯಂ ನಿವೃತ್ತಿ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳಲು ಅಥವಾ ಮುಚ್ಚುವಿಕೆ ಪರಿಹಾರ ಧನದೊಂದಿಗೆ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಿಂದ ವಿಲೀನಗೊಳ್ಳುವುದನ್ನು ಆಯ್ಕೆ ಮಾಡಿಕೊಳ್ಳಲು ಮುಕ್ತ ಅವಕಾಶ ನೀಡಿತು.

5. ಕರ್ನಾಟಕದ ಪಲ್ಪ್‌ವುಡ್ ನಿಗಮದ ಕೆಲವು ನೌಕರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಂಖ್ಯೆ: 2216–2005ನ್ನು ದಾಖಲಿಸಿದ್ದು, ಸದರಿ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠವು ತನ್ನ ದಿನಾಂಕ 22–6–2005ರ ತೀರ್ಪಿನಲ್ಲಿ ಸ್ವಯಂ ನಿವೃತ್ತಿ ಯೋಜನೆಯನ್ನು ಹೊಂದಲು ನಿರಾಕರಿಸಿದ 69 ನೌಕರರನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಲ್ಲಿ ವಿಲೀನಗೊಳಿಸಲು ಆದೇಶಿಸಿತು. ಸದರಿ ಆದೇಶದ ವಿರುದ್ಧ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ವಿಶೇಷ ರಜಾ ಅರ್ಜಿ (ಎಸ್‌ಎಲ್‌ಪಿ) ಸಂಖ್ಯೆ: 19783/2005ನ್ನು ದಾಖಲಿಸಿತು.

6. ಈ ಮಧ್ಯೆ ಕರ್ನಾಟಕ ಪಲ್ಪ್‌ವುಡ್ ನಿಗಮದ ಸ್ವಯಂ ನಿವೃತ್ತಿ ಯೋಜನೆಯನ್ನು ಆಯ್ಕೆ ಮಾಡಿಕೊಂಡ ನೌಕರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿ ಸಂಖ್ಯೆ: 678/2005ನ್ನು ದಾಖಲಿಸಿದ ಮೇರೆಗೆ ಸರ್ಕಾರವು ಆದೇಶ ಸಂಖ್ಯೆ: ಡಿಪಿಇ 34 ಎಆರ್‌ಯು 2005, ದಿನಾಂಕ 19–1–2006ರಲ್ಲಿ ರೂ. 2,89,35,520ಗಳನ್ನು ಬಿಡುಗಡೆ ಮಾಡಿತು.

7. ಮಾನ್ಯ ಸರ್ವೋಚ್ಚ ನ್ಯಾಯಾಲಯವು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಸಲ್ಲಿಸಿದ ಮೇಲ್ಮನವಿ ಮೇಲೆ ದಿನಾಂಕ 11–10–2007ರಂದು ಆದೇಶ ನೀಡಿ ಕರ್ನಾಟಕ ಪಲ್ಪ್‌ವುಡ್ ನೌಕರರನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಲ್ಲಿ ವಿಲೀನಗೊಳಿಸುವ ಮಾನ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ತಳ್ಳಿಹಾಕಿತು.

8. ಸರ್ಕಾರವು ಆದೇಶ ಸಂಖ್ಯೆ: ಡಿಪಿಇ 34 ಎಆರ್‌ಯು 2005 ದಿನಾಂಕ 19–1–2006ರಲ್ಲಿ ಕರ್ನಾಟಕ ಪಲ್ಪ್‌ವುಡ್ ನಿಗಮದ (10 ಜನ ತಾತ್ಕಾಲಿಕ ನೌಕರರಿಗೆ ಮುಚ್ಚುವಿಕೆ ಪರಿಹಾರ ಧನ ಹೊರತುಪಡಿಸಿ) ನೌಕರರ ಸೇವಾ ಅರ್ಹತಾ ದಿನಾಂಕ ನಿಗಧಿಪಡಿಸುವುದನ್ನು ಬಾಕಿಯಿಟ್ಟು, ಸದರಿಯವರನ್ನು ಸೇವೆಯಲ್ಲಿ ಸಕ್ರಮಗೊಳಿಸಿದ ದಿನಾಂಕದಿಂದ ಅನ್ವಯವಾಗುವಂತೆ ಸ್ವಯಂ ನಿವೃತ್ತಿ ಯೋಜನೆಗಾಗಿ ರೂ. 2,89,35,520ಗಳನ್ನು ಬಿಡುಗಡೆಗೊಳಿಸಿರುತ್ತದೆ.

9. ಮೇಲೆ (4)ರಲ್ಲಿ ಓದಲಾದ ದಿನಾಂಕ 21–2–2008ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಲ್ಪ್‌ವುಡ್ ನಿಗಮ ರವರು ನಿಗಮದ 170 ನೌಕರರಿಗೆ ಸದರಿ ನೌಕರರು ದಿನಗೂಲಿ ನೌಕರರಾಗಿ ಸಲ್ಲಿಸಿದ ಸೇವೆಯನ್ನು ಗಣನೆಗೆ ತೆಗೆದುಕೊಂಡು, ಎಕ್ಸ್‌ಗ್ರೇಷಿಯಾ ವ್ಯತ್ಯಾಸದ ಮೊತ್ತ ರೂ. 1.55 ಕೋಟಿಗಳನ್ನು ಹಾಗೂ ವೇತನ ಬಡ್ತಿ ಮತ್ತು ತುಟ್ಟಿಭತ್ಯೆಯ ಕಂತುಗಳ ವ್ಯತ್ಯಾಸದ ಮೊತ್ತ ರೂ. 1.71 ಕೋಟಿಗಳು ಹೀಗೆ ಒಟ್ಟು ಮೊತ್ತ ರೂ. 3.26 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಆದುದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 46 ಎಫ್‌ಪಿಸಿ 2006, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2008**.

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

1) ಸ್ವಯಂ ನಿವೃತ್ತಿ ಯೋಜನೆಯನ್ನು ಹೊಂದಲು ನಿರಾಕರಿಸಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಲ್ಲಿ ವಿಲೀನ ಹೊಂದಲು ನ್ಯಾಯಾಲಯಕ್ಕೆ ಮೊರೆ ಹೋದ 70 ನೌಕರರನ್ನು (ಒಬ್ಬರು ಮೃತಪಟ್ಟಿದ್ದು) ಸರ್ವೋಚ್ಚ ನ್ಯಾಯಾಲಯವು ಸದರಿಯವರ ವಿಲೀನವನ್ನು ತಿರಸ್ಕರಿಸಿರುವುದರಿಂದ ಆದೇಶ ಸಂಖ್ಯೆ: ಡಿಡಿಪಿಇಆರ್ 56 ಎಆರ್‌ಯು 2002, ದಿನಾಂಕ 2–1–2004ರ ಪ್ರಕಾರ ಸದರಿಯವರನ್ನು ಸೇವೆಯಿಂದ ತೆಗೆದುಹಾಕುವುದು; ಹಾಗೂ

2) ಕರ್ನಾಟಕ ಪಲ್ಪ್‌ವುಡ್ ನಿಗಮದ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿಯನ್ನು ಸಲ್ಲಿಸಿರುವ 100 ಜನ ನೌಕರರಿಗೆ ಅವರು ಸೇವೆಯಿಂದ ಸಕ್ರಮ ಹೊಂದಿದ ದಿನಾಂಕದಿಂದ ಅನ್ವಯವಾಗುವಂತೆ ಪರಿಗಣಿಸಿ ಈಗಾಗಲೇ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ/ ಕರ್ನಾಟಕ ಪಲ್ಪ್‌ವುಡ್ ನಿಗಮದವರು ಸ್ವಯಂ ನಿವೃತ್ತಿ ಯೋಜನೆಗೆ ನೀಡಿರುವ ರೂ. 2,90,92,927/– (ರೂ. ಎರಡು ಕೋಟಿ ತೊಂಭತ್ತು ಲಕ್ಷದ ತೊಂಭತ್ತೆರಡು ಸಾವಿರದ ಒಂಭೈನೂರ ಇಪ್ಪತ್ತೇಳು ಮಾತ್ರ)ರ ಪ್ಯಾಕೇಜ್‌ಗೆ ಬದ್ಧವಾಗಿರುವುದು.

ಸದರಿ ಆದೇಶವನ್ನು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಇಲಾಖೆಗಳು ಕ್ರಮವಾಗಿ ಅನಧಿಕೃತ ಟಿಪ್ಪಣಿಗಳ ಸಂಖ್ಯೆ: ಎಲ್‌ಎಡಬ್ಲ್ಯು 370 ಒಪಿಎನ್ 2006, ದಿನಾಂಕ 11–2–2008 ಮತ್ತು ಸಂಖ್ಯೆ ಸಾಉಇ 62 ಎಸ್‌ಪಿಯು 2007, ದಿನಾಂಕ 20–11–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1317

**ಹೆಚ್.ಎಂ. ಮಲ್ಲಿಕಾರ್ಜುನ ಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ವಿಭಾಗೀಯ ಸಹ ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರವರಿಗೆ ಕೇಂದ್ರೀಕೃತ ದಾಖಲಾತಿ ಘಟಕದಿಂದ ಹೆಚ್ಚುವರಿ ಕಾರ್ಯವನ್ನು ವಹಿಸುವ ಕುರಿತು.

**ಓದಲಾಗಿದೆ:** 1. ಅಧ್ಯಕ್ಷರು, ಕರ್ನಾಟಕ ರಾಜ್ಯ ಶಿಕ್ಷಣಾಧಿಕಾರಿಗಳ ಸಂಘ, ರವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 2–2–2008ರ ಮನವಿ.

2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿ1(1) ಇತರೆ ಸಿ.ಎ.ಸಿ.ಸ.ನಿ.ಮಂ–55/2007–08, ದಿನಾಂಕ 13–3–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 2–2–2008ರ ಮನವಿಯಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಶಿಕ್ಷಣಾಧಿಕಾರಿಗಳ ಸಂಘ, ಇವರು ಕೇಂದ್ರಕೃತಿ ದಾಖಲಾತಿ ಘಟಕ, ಬೆಂಗಳೂರು, ಇಲ್ಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ, ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರ ನೇಮಕಾತಿ, ಕೇಂದ್ರೀಕೃತ ದಾಖಲಾತಿ ಘಟಕದಲ್ಲಿ ಬಿ.ಇಡಿ ಹಾಗೂ ಡಿ.ಇಡಿ ತರಬೇತಿ ಕೋರ್ಸ್‌ಗಳಿಗೆ ದಾಖಲಾತಿ ಪ್ರಕ್ರಿಯೆ ನಡೆಯುತ್ತಿದ್ದು, ಪ್ರತಿ ವರ್ಷ 8–10 ಸಾವಿರ ಶಿಕ್ಷಕರುಗಳಿಗೆ ನೇಮಕಾತಿಗೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ನಡೆಯುತ್ತಿದ್ದು, ಇವುಗಳ ನಿರ್ವಹಣೆಗೆ ಅನುಭವಿ, ಜವಾಬ್ದಾರಿಯುತ ಒಂದು ಸಹ ನಿರ್ದೇಶಕರ ವೃಂದದ ಅಧಿಕಾರಿ ಸೇವೆಯ ಅಗತ್ಯವಿದ್ದು, ಒಂದು ಸಹ ನಿರ್ದೇಶಕರ ಹುದ್ದೆಯನ್ನು ಸೃಜಿಸಲು ಕೋರಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 13–3–2008ರ ಪ್ರಸ್ತಾವನೆಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಬೆಂಗಳೂರು ವಿಭಾಗದ ಸಹ ನಿರ್ದೇಶಕರನ್ನು ಆಯುಕ್ತರ ಕಛೇರಿ, ಬೆಂಗಳೂರು, ಇಲ್ಲಿ ವಿಲೀನಗೊಳಿಸಲಾಗಿದ್ದು, ಪ್ರಸ್ತುತ ಇವರು ಆಯುಕ್ತರ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಇವರಿಗೆ ಕೇಂದ್ರೀಕೃತ ದಾಖಲಾತಿ ಘಟಕದಿಂದ ಹೆಚ್ಚುವರಿ ಕಾರ್ಯಭಾರವನ್ನ ವಹಿಸಬಹುದೆಂದು ಬೆಂಗಳೂರು ವಿಭಾಗದ ನೇಮಕಾತಿ ಪ್ರಕ್ರಿಯೆ ಹಾಗೂ ಇತರೆ ಕೆಲಸ ಕಾರ್ಯಗಳ ಜೊತೆಗೆ ಕೇಂದ್ರೀಕೃತ ದಾಖಲಾತಿ ಘಟಕದ ಕಾರ್ಯವನ್ನು ವಹಿಸುವುದರಿಂದ ಪೂರ್ಣ ಪ್ರಮಾಣದ ಕಾರ್ಯಭಾರವನ್ನು ಸಹ ನಿರ್ದೇಶಕರಿಗೆ ವಹಿಸಿದಂತಾಗುತ್ತದೆಂದು, ಅದರಂತೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 65 ಡಿಪಿಐ 2008, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಂಗಳೂರು ವಿಭಾಗದ ಸಹ ನಿರ್ದೇಶಕರ ಹುದ್ದೆಯನ್ನು ಆಯುಕ್ತರ ಕಛೇರಿ, ಬೆಂಗಳೂರು ಇಲ್ಲಿಗೆ ವಿಲೀನಗೊಳಿಸಿರುವುದರಿಂದ, ಈ ಹುದ್ದೆ ಸಹ ನಿರ್ದೇಶಕರು, ಕೇಂದ್ರೀಕೃತ ದಾಖಲಾತಿ ಘಟಕದ ಹೆಚ್ಚುವರಿ ಕಾರ್ಯಭಾರ ಹಾಗೂ ಬೆಂಗಳೂರು ವಿಭಾಗದ ನೇಮಕಾತಿ ಪ್ರಕ್ರಿಯೆ ಮತ್ತು ಕೇಂದ್ರೀಕೃತ ದಾಖಲಾತಿ ಘಟಕದ ಕಾರ್ಯವನ್ನು ನಿರ್ವಹಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1307

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)